ಛಾಯಾಚಿತ್ರಕಲಾವಿದ, ಪ್ರಬುದ್ಧ ಲೇಖಕ

# ಡಾ॥ ಕೃಷ್ಣಾನಂದ ಕಾಮತ್

ಡಾ॥ ಗೀತಾ ಶೆಣೈ






ಸಂಪಾದಕ ▸ ಡಾ॥ ನಾ ಸೋಮೇಶ್ವರ

ನವಕರ್ನಾಟಕ ಪ್ರಕಾಶನದ ೫೦೧೭ನೇ ಪ್ರಕಟಣೆ

ಸಂಪಾದಕ

**ಡಾ॥ ನಾ. ಸೋಮೇಶ್ವರ**

# ಛಾಯಾಚಿತ್ರ ಕಲಾವಿದ, ಪ್ರಬುದ್ಧ ಲೇಖಕ
# ಡಾ॥ ಕೃಷ್ಣಾನಂದ ಕಾಮತ್

ಲೇಖಕಿ

**ಡಾ॥ ಗೀತಾ ಶೆಣೈ**



CHHAYAACHITRA KAALAVIDA, PRABUDDHA LEKHAKA
**DR. KRISHNANANDA KAMATH** (Kannada)
*A short biography of Dr. Krishnananda Kamath*
*by Dr. Geetha Shenoy in the series 'Vishwamanyaru'*
*Editor : Dr. N. Someshwara*

First Edition : 2018 Pages : 48 Price : ₹ 30
Paper : 70 gsm Maplitho 13.6 Kgs (1/8 Crown Size)

ಮೊದಲ ಮುದ್ರಣ : 2018

ಪ್ರತಿಗಳ ಸಂಖ್ಯೆ : 1000

ಕನ್ನಡ ಕೃತಿಸ್ವಾಮ್ಯ : ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್
ಮೂಲ ಹಕ್ಕುಗಳು : ಲೇಖಕರವು

**ಬೆಲೆ : ₹ 30**

ಮುಖಪುಟ ವಿನ್ಯಾಸ : ರವಿಕುಮಾರ್ ಅಜ್ಜೀಪುರ

ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೆಟ್ ಲಿಮಿಟೆಡ್**
ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು – 560 001
ದೂರವಾಣಿ : 080–22161900 / 22161901 / 22161902

*ಶಾಖೆಗಳು/ ಮಳಿಗೆಗಳು*
ಕ್ರೆಸೆಂಟ್ ರಸ್ತೆ, ಬೆಂಗಳೂರು – 1, ✆ 080–22161913/14, Email : nkpsales@gmail.com
ಕೆಂಪೇಗೌಡ ರಸ್ತೆ, ಬೆಂಗಳೂರು – 9, ✆ 080–22203106, Email : nkpkgr@gmail.com
ಗಾಂಧಿನಗರ, ಬೆಂಗಳೂರು – 9, ✆ 080–22251382, Email : nkpgnr@gmail.com
ಕೆ.ಎಸ್.ರಾವ್ ರಸ್ತೆ, ಮಂಗಳೂರು – 1, ✆ 0824–2441016, Email : nkpmng@gmail.com
ಬಲ್ಮಠ, ಮಂಗಳೂರು – 1, ✆ 0824–2425161, Email : nkpbalmatta@gmail.com
ರಾಮಸ್ವಾಮಿ ವೃತ್ತ ಮೈಸೂರು–24, ✆ 0821–2424094, Email : nkpmysuru@gmail.com
ಸ್ಟೇಷನ್ ರಸ್ತೆ, ಕಲಬುರಗಿ – 2, ✆ 08472–224302, Email : nkpglb@gmail.com

ಮುದ್ರಕರು : ಪ್ರಿಂಟೆಕ್ ಪ್ರಿಂಟರ್ಸ್, ಬೆಂಗಳೂರು – 560 079

**0101185017** **ISBN 978-93-86809-10-0**

---

Published by Navakarnataka Publications Private Limited, Embassy Centre
Crescent Road, Bengaluru - 560 001 (India). Email : navakarnataka@gmail.com

# ನುಡಿ ಮಂಥನ



ಕೃಷ್ಣಾನಂದ ಲಕ್ಷ್ಮಣ ಕಾಮತ್ (1934–2002) ಕನ್ನಡದ ವಿಶಿಷ್ಟ ಪ್ರತಿಭೆ. ಕನ್ನಡ ಸಾಹಿತ್ಯದಲ್ಲಿ ಶಿವರಾಮ ಕಾರಂತ, ಬಿಜಿಎಲ್ ಸ್ವಾಮಿ ಹಾಗೂ ಪೂರ್ಣಚಂದ್ರ ತೇಜಸ್ವಿ ಅಪರೂಪದ ವ್ಯಕ್ತಿಗಳು. ಅವರು ತಮಗೆ ಇಷ್ಟವಾದದ್ದನ್ನು ಮಾಡಿದರು, ಓದಿದರು, ಬರೆದರು, ಬದುಕಿದರು. ಬಯಸಿದಂತೆ ಬದುಕಿದ ಅವಧೂತರು. ನಿಜವಾದ ಅರ್ಥದಲ್ಲಿ ಜೀವಿಸಿದರು. ಆ ಸಾಲಿನಲ್ಲಿ ನಿಲ್ಲಬಲ್ಲ ಯೋಗ್ಯತೆಯುಳ್ಳವರು ಕೃಷ್ಣಾನಂದ ಕಾಮತರು. ಕನ್ನಡಿಗರು ಕಾರಂತರನ್ನು, ಸ್ವಾಮಿಯವರನ್ನು ಹಾಗೂ ತೇಜಸ್ವಿಯವರನ್ನು ಗುರುತಿಸಿ ಗೌರವಿಸಿದರು. ಆದರೆ ಅಂತಹ ಗೌರವಕ್ಕೆ ಅರ್ಹರಾಗಿದ್ದರೂ ಅದನ್ನು ಪಡೆಯದೇ ಹೋದವರು ಕಾಮತರು. ಕಾಮತರು ಈ ಬಗ್ಗೆ ತಲೆಕೆಡಿಸಿಕೊಂಡವರೇ ಅಲ್ಲ. ಅವರಿಗೆ ತಾವಾಯಿತು ತಮ್ಮ ಕೆಲಸವಾಯಿತು. ಜನಸಂಪರ್ಕ ಕಡಿಮೆ. ಜನರೊಡನೆ ಮಾತನಾಡಿದ್ದು ಕಡಿಮೆ. ಹರಟೆ ಹೊಡೆಯುವ ಜಾಯಮಾನದವರಲ್ಲ. ನಿಜ, ಆದರೆ ಅವರಿಗೆ ಸಲ್ಲಬಹುದಾಗಿದ್ದ ಗೌರವವನ್ನು ಸಹೃದಯೀ ಕನ್ನಡಿಗ ಹೇಗೆ ಮರೆತ ಎನ್ನುವ ಸಣ್ಣ ಕೊರಗು ಕಾಡುತ್ತಿದೆ.

ಕೃಷ್ಣಾನಂದ ಕಾಮತರು ಬಹುಮುಖ ಪ್ರತಿಭೆಯುಳ್ಳವರು. ಅವರು ಓದಿದ್ದು ಕೀಟಶಾಸ್ತ್ರವಾದರೂ ಸೇವೆಸಲ್ಲಿಸಿದ ಕ್ಷೇತ್ರಗಳು ಹಲವಾರು. ಅವರು ಶಿಕ್ಷಣತಜ್ಞ, ವಿದ್ವಾಂಸ, ಬರಹಗಾರ, ಛಾಯಾಚಿತ್ರಗ್ರಾಹಕ, ಚಿತ್ರಕಾರ, ಪ್ರವಾಸ ಪ್ರಿಯ, ಪಾಕಶಾಸ್ತ್ರ ಪ್ರವೀಣ... ಎಲ್ಲವೂ ಆಗಿದ್ದರು. ಅವರು ಸೃಜನಶೀಲತೆಯ ಪ್ರತಿಬಿಂಬ. ಪ್ರತಿಭೆಯ ಸಾಗರ. ಚಿಕಿತ್ಸಕ ಮನಸ್ಸಿನ ಆಲ್ ರೌಂಡರ್! ಪ್ರತಿಯೊಂದು ವಿಷಯದಲ್ಲಿಯೂ ಆಸಕ್ತಿಯಿತ್ತು. ಅವರಲ್ಲಿ ಮಗುವಿನಲ್ಲಿರ ಬೇಕಾದ ಮುಗ್ಧತೆಯೂ ಇತ್ತು. ತಿಳಿದುಕೊಳ್ಳಬೇಕೆಂಬ ಕುತೂಹಲವಿತ್ತು.

ಹಾಗಾಗಿ ಅವರು ವಿಭಿನ್ನ ವಿಷಯಗಳ ಮೇಲೆ ಅನೇಕ ಪುಸ್ತಕಗಳನ್ನು ಬರೆದರು. ಪ್ರವಾಸ ಕಥನ, ಕಲೆ, ಪರಿಸರ, ಪ್ರಬಂಧ, ಕಾದಂಬರಿ, ಪ್ರಾಣಿ–ಪಕ್ಷಿಗಳ 22 ಪುಸ್ತಕಗಳು. ಅದ್ಭುತ ಕುಟುಂಬ ವತ್ಸಲರಾಗಿದ್ದ ಕಾಮತರು ತಮ್ಮ ಪತ್ನಿ ಜ್ಯೋತ್ಸ್ನಾರವರಿಗೆ ಬರೆದ ಪತ್ರಗಳು (ಅವರ ಪತ್ನಿ, ಅವರ ಚಿರಕಾಲದ ಪ್ರೇಯಸಿ) ಹಾಗೂ ಮಗ ವಿಕಾಸನಿಗೆ ಬರೆದ ಪತ್ರಗಳು ಕನ್ನಡ ಪತ್ರ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿವೆ. ಅವರು ಬರೆದ ಮೂರು ಕೃತಿಗಳಿಗೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗಳು ಬಂದಿವೆ. ಅವರು ತಮ್ಮ ಹೆಂಡತಿ ಜ್ಯೋತ್ಸ್ನಾ ಮತ್ತು ಮಗ ವಿಕಾಸ್ ಅವರಿಗೆ ಬರೆದ ಪತ್ರಗಳ ಸಂಕಲನಗಳನ್ನೂ ತಂದಿದ್ದಾರೆ.

ಅಮೆರಿಕದಲ್ಲಿ ಪಿಎಚ್.ಡಿ. ಪಡೆದ ಕಾಮತರು ಮನಸ್ಸು ಮಾಡಿದ್ದರೆ ಅಲ್ಲಿಯೇ ಉಳಿದು ಅಪಾರ ಹಣ ಮತ್ತು ಕೀರ್ತಿಯನ್ನು ಪಡೆಯಬಹುದಿತ್ತು. ಆದರೆ ಅವರು ಹಾಗೆ ಮಾಡಲಿಲ್ಲ. ಭಾರತಕ್ಕೆ ಬಂದು ನೆಲೆಸಿದರು. ತಮಗಿಷ್ಟವಾದ 'ವೈಜ್ಞಾನಿಕ ಛಾಯಾಚಿತ್ರ ಕಲೆ'ಯನ್ನು ಅಭ್ಯಾಸ ಮಾಡಿದರು. ಕನ್ನಡದಲ್ಲಿ ಸರಳವಾಗಿ ವಿಜ್ಞಾನ ವಿಷಯಗಳನ್ನು ಹೇಗೆ ಹೇಳಬಹುದೆಂದು ಕಾಮತರು ಬರೆದು ತೋರಿಸಿದರು. ಕಾಮತರ ಮಗ ವಿಕಾಸ್ 1997ರಲ್ಲಿ ಅಂತರ್ಜಾಲ ತಾಣವನ್ನು ಆರಂಭಿಸಿದರು. ಈ ತಾಣದಲ್ಲಿ ನಿಯಮಿತವಾಗಿ ಕಾಮತರು ಬರೆಯುತ್ತಿದ್ದರು. ಈ ತಾಣಗಳ ಮೂಲಕವೇ ಕಾಮತರ ಬರಹಗಳು, ಛಾಯಾಚಿತ್ರಗಳು, ರೇಖಾಚಿತ್ರಗಳು ವಿಶ್ವಪ್ರಸಿದ್ಧಿಯನ್ನು ಪಡೆದವು. ಕಾಮತರು ಇಂದು ನಮ್ಮೊಡನೆ ಇಲ್ಲ. ಅವರ ಮಡದಿ, ಮಗ ಸೊಸೆಯರು ಆ ಅಂತರ್ಜಾಲ ತಾಣವನ್ನು ಮುಂದುವರೆಸಿಕೊಂಡು ಬರುತ್ತಾ ಕೃಷ್ಣಾನಂದ ಕಾಮತರ ಹೆಸರು ಸದಾ ಹಸಿರಾಗಿರುವಂತೆ ಮಾಡುತ್ತಿರುವರು. ಕಾಮತರ ಬಗ್ಗೆ ಕೃತಿ ರಚನೆ ಮಾಡಿದ ಲೇಖಕಿ ಡಾ॥ ಗೀತಾ ಶೆಣೈಯವರಿಗೂ ಅಭಿನಂದನೆಗಳು.

(ಡಾ॥ ನಾ. ಸೋಮೇಶ್ವರ)
naasomeswara@gmail.com

ಬೆಂಗಳೂರು
ಜನವರಿ, 2018

## ಛಾಯಾಚಿತ್ರ ಕಲಾವಿದ, ಪ್ರಬುದ್ಧ ಲೇಖಕ
## ಡಾ॥ ಕೃಷ್ಣಾನಂದ ಕಾಮತ್

ಈ ಜಗತ್ತು ಅತ್ಯಂತ ವಿಶಾಲವಾದುದು. ನೆಲ, ಜಲ, ಆಕಾಶವನ್ನು ಒಳಗೊಂಡಿರುವಂತಹದು. ಈ ಅಗಾಧ ಜಗತ್ತಿನಲ್ಲಿ ಅಸಂಖ್ಯಾತ ಜೀವಿಗಳು, ಜೀವರಹಿತ ವಸ್ತುವೈವಿಧ್ಯಗಳಿವೆ. ಜೀವಜಗತ್ತಿನಲ್ಲಿ ಕೀಟಗಳು, ಪ್ರಾಣಿಗಳು, ಪಕ್ಷಿಗಳು, ಗಿಡಮರಗಳು ಮತ್ತು ಸೂಕ್ಷ್ಮಾಣು ಜೀವಿಗಳಿದ್ದರೆ, ಜೀವರಹಿತ ಜಗತ್ತಿನಲ್ಲಿ ಕಲ್ಲು, ಮಣ್ಣು, ಬೆಟ್ಟ, ಗುಡ್ಡ, ನದಿ, ಸಮುದ್ರ ಇತ್ಯಾದಿ ಇವೆ. ಜೀವಿಗಳ ಬದುಕಿಗೆ ಆಧಾರವನ್ನು ಒದಗಿಸುವುದು ಸುತ್ತಲಿನ ಪರಿಸರದ ಗಾಳಿ, ಮಳೆ, ಬಿಸಿಲು, ಬೆಳಕು ಮತ್ತು ಕತ್ತಲೆ.

ಮನುಷ್ಯ ಜೀವಜಗತ್ತಿನ ಒಂದು ಭಾಗವಾಗಿದ್ದಾನೆ. ಸ್ವತಂತ್ರವಾಗಿ ನಡೆದಾಡಬಲ್ಲ, ಆಲೋಚಿಸಬಲ್ಲ ಹಾಗೂ ಹೊಸ, ಹೊಸ ಆವಿಷ್ಕಾರಗಳ ಮೂಲಕ ಜಗತ್ತಿನಲ್ಲಿ ಗಮನಾರ್ಹ ಮಾರ್ಪಾಟುಗಳನ್ನು ತರಬಲ್ಲ ಮನುಷ್ಯ ಪ್ರಾಣಿವರ್ಗದಲ್ಲಿ ಬುದ್ಧಿಜೀವಿ ಎಂದೆನಿಸಿಕೊಂಡಿದ್ದಾನೆ. ಅವನು ತನ್ನ ಸ್ವಂತ ಬಳಕೆಗಾಗಿ ಕೆಲವು ಪ್ರಾಣಿ, ಪಕ್ಷಿಗಳನ್ನು ಸಾಕಬಹುದು; ಗಿಡ, ಮರಗಳನ್ನು ಬೆಳೆಸಬಹುದು. ಆದರೆ ಸಾಮಾನ್ಯವಾಗಿ ಮನುಷ್ಯನಿಗೆ ತನ್ನ ಪರಿಸರದ ಗಿಡ, ಮರಗಳ ಕುರಿತು, ಪಶು, ಪಕ್ಷಿಗಳ ಕುರಿತು ಸರಿಯಾದ ತಿಳಿವಳಿಕೆ ಇರುವುದಿಲ್ಲ. ಅನೇಕರಿಗೆ ತಮ್ಮ ಮನೆಯಂಗಳದಲ್ಲಿ, ಹಿತ್ತಿಲಿನಲ್ಲಿ ಬೆಳೆಯುವ ಗಿಡ, ಬಳ್ಳಿ, ಪೊದೆ, ಮರಗಳ ಕುರಿತು ಏನೂ ಗೊತ್ತಿರುವುದಿಲ್ಲ. ಕಣ್ಣ ಮುಂದೆ ಓಡಾಡಿಕೊಳ್ಳುವ ಇಲಿ, ಇರುವೆ, ಕಾಗೆ, ಗುಬ್ಬಿ, ಪಾರಿವಾಳ, ಬೆಕ್ಕು, ನಾಯಿ, ಹಾವುಗಳನ್ನು ನೋಡಿ ಗೊತ್ತಿದ್ದರೂ, ಅವುಗಳ ದೇಹ ರಚನೆ, ಅವುಗಳ ಜೀವನ ವಿಧಾನ, ಅವುಗಳ ಸಂವೇದನೆಗಳು ತಿಳಿದಿರುವುದಿಲ್ಲ. ಮನುಷ್ಯ ತನ್ನ

ಈ ಸಹಜೀವಿಗಳ ಕುರಿತು ತಿಳಿವಳಿಕೆ, ಕಾಳಜಿ, ಪ್ರೀತಿ ಹಾಗೂ ಗೌರವವನ್ನು ಮೈಗೂಡಿಸಿಕೊಂಡರೆ, ತನ್ನ ಪರಿಸರವನ್ನು ಕಾಪಾಡಿಕೊಳ್ಳುವ ಪ್ರಜ್ಞೆಯನ್ನು ಬೆಳೆಸಿಕೊಂಡರೆ ಈ ಜಗತ್ತು ಇನ್ನು ಸಹಸ್ರಾರು ವರ್ಷ ತಾಳಿ ಬಾಳುತ್ತದೆ; ಇಲ್ಲದಿದ್ದರೆ ಅದರ ಅವನತಿ ಖಚಿತವೆಂದು ಭೂವಿಜ್ಞಾನಿಗಳು, ಪರಿಸರ ತಜ್ಞರು ಹೇಳುತ್ತಾರೆ. ಈ ವಿಜ್ಞಾನಿಗಳಲ್ಲಿ ಡಾ॥ ಕೃಷ್ಣಾನಂದ ಕಾಮತ್ ಒಬ್ಬರು. ಇವರು ಜೀವಜಗತ್ತಿನ ಕುರಿತು ವಿಸ್ತೃತ ಅಧ್ಯಯನ ಮತ್ತು ಸಂಶೋಧನೆಯನ್ನು ನಡೆಸಿದ ಜೀವಶಾಸ್ತ್ರಜ್ಞರೂ, ಕೀಟ ವಿಜ್ಞಾನಿಯೂ ಆಗಿದ್ದಾರೆ.

ಯಾವುದೇ ಕ್ಷೇತ್ರದ ಸಂಶೋಧನೆಯು ಸಾಮಾನ್ಯ ಜನರಿಗೆ ಉಪಯುಕ್ತವೆನಿಸುವ ರೀತಿಯಲ್ಲಿದ್ದರೆ ಅದಕ್ಕೆ ಹೆಚ್ಚಿನ ಮಹತ್ವ ಒದಗಿ ಬರುತ್ತದೆ. ಡಾ॥ ಕೃಷ್ಣಾನಂದ ಕಾಮತರು ವಿದೇಶದಲ್ಲಿ ಸಂಶೋಧನೆ ನಡೆಸಿ ಉನ್ನತ ಪದವಿ ಪಡೆದವರು. ಭಾರತಕ್ಕೆ ಮರಳಿ ಬಂದು ತಾಯ್ನೆಲದ ಸೇವೆಗೆ ಬದುಕನ್ನು ಮುಡಿಪಾಗಿಟ್ಟುಕೊಂಡವರು. ತಮ್ಮ ಅಧ್ಯಯನ, ಅವಲೋಕನ, ವ್ಯಾಪಕ ಪ್ರವಾಸ ಹಾಗೂ ಕ್ಷೇತ್ರಕಾರ್ಯಗಳ ಮೂಲಕ ತಾನು ಗ್ರಹಿಸಿದ ಜೀವಜಗತ್ತಿನ ಸೂಕ್ಷ್ಮಾತಿಸೂಕ್ಷ್ಮ ವಿವರಗಳನ್ನು ವೈಜ್ಞಾನಿಕ ಹಿನ್ನೆಲೆಯೊಂದಿಗೆ ಸಾಮಾನ್ಯ ಜನರಿಗೆ ತಲುಪಿಸುವ ಕಾರ್ಯವನ್ನು ನಡೆಸಿದವರು. ಅವರು ತಮ್ಮ ಜ್ಞಾನವನ್ನು ವಿದ್ವತ್ ವಲಯಕ್ಕೆ ಸೀಮಿತವಾಗಿ ಬಳಸಿಕೊಳ್ಳಲಿಲ್ಲ; ವೈವಿಧ್ಯಮಯ ಪತ್ರಿಕಾ ಲೇಖನಗಳನ್ನು, ಹಲವಾರು ಪುಸ್ತಕಗಳನ್ನು ನಾಡಿನ ಭಾಷೆ ಕನ್ನಡದಲ್ಲಿ ಪ್ರಕಟಿಸುವ ಮೂಲಕ, ನೂರಾರು ರೇಖಾಚಿತ್ರಗಳನ್ನು, ಸಾವಿರಾರು ಛಾಯಾಚಿತ್ರಗಳನ್ನು ವಿವಿಧ ಗ್ರಂಥಗಳಲ್ಲಿ ಅಳವಡಿಸುವುದರ ಮೂಲಕ ಜೀವಜಗತ್ತಿನ ದರ್ಶನವನ್ನು ಕರ್ನಾಟಕದ ಮನೆ ಮನೆಗೆ ತಲುಪಿಸುವ ಕಾಯಕವನ್ನು ನಡೆಸಿದರು.

ಇಂದು ಡಾ॥ ಕೃಷ್ಣಾನಂದ ಕಾಮತರನ್ನು ಕೀಟ ವಿಜ್ಞಾನಿಯಾಗಿ, ಪರಿಸರತಜ್ಞರಾಗಿ, ಪ್ರವಾಸಿಯಾಗಿ, ಛಾಯಾಗ್ರಾಹಕರಾಗಿ, ಚಿತ್ರಕಲಾವಿದರಾಗಿ ಹಾಗೂ ಸಾಹಿತಿಯಾಗಿ ಗುರುತಿಸಲಾಗುತ್ತದೆ. ಸರಳತೆಯೇ ಸಾಕಾರವೆಂಬಂತೆ ಎಲೆಮರೆಯ ಕಾಯಿಯಾಗಿ ಬದುಕಿದ್ದ ಕೃಷ್ಣಾನಂದ ಕಾಮತರನ್ನು ಮುಖತಃ ಭೇಟಿಯಾದವರು, ಅವರೊಂದಿಗೆ ನಿಕಟ ಸಂಪರ್ಕದಲ್ಲಿದ್ದವರು

ತುಂಬಾ ಕಡಿಮೆ. ಆದರೆ ಆಧುನಿಕ ತಂತ್ರಜ್ಞಾನದ ನೆರವಿನಿಂದ 'ಕಾಮತ್' ಅಂತರಜಾಲ ತಾಣವು ಅವರ ಕಾರ್ಯಸಾಧನೆಯನ್ನು ದೇಶ, ವಿದೇಶಗಳಿಗೆ ಪ್ರಸಾರ ಮಾಡುವುದರ ಮೂಲಕ ಅವರಿಗೆ ವಿಶ್ವಮಾನ್ಯತೆಯನ್ನು ಒದಗಿಸಿದೆ.

ಡಾ॥ ಕೃಷ್ಣಾನಂದ ಕಾಮತ್ ನಿಜಜೀವನದಲ್ಲಿ ಹೇಗಿದ್ದರು, ಅವರ ಸಾಧನೆ ಏನು ಎಂಬುದನ್ನು ತಿಳಿದುಕೊಳ್ಳೋಣ.

## ಹಿಂಗಿದ್ರು ನಮ್ ಕಮ್ತಿ

ಕರ್ನಾಟಕ ರಾಜ್ಯದ ಉತ್ತರ ಕನ್ನಡ ಜಿಲ್ಲೆ ನೈಸರ್ಗಿಕ ಸೌಂದರ್ಯಕ್ಕೆ, ಮತ್ಸ್ಯೋದ್ಯಮಕ್ಕೆ ಹೆಸರಾದುದು. ತನ್ನ ಅಂಚಿನುದ್ದಕ್ಕೂ ಸಮುದ್ರ ತೀರವನ್ನು ಹೊಂದಿರುವ ಈ ಜಿಲ್ಲೆಯ ಪ್ರಮುಖ ಪಟ್ಟಣ ಹೊನ್ನಾವರ. ಇದು ಕೃಷ್ಣಾನಂದ ಕಾಮತರ ಜನ್ಮಸ್ಥಳ.

ಕೃಷ್ಣಾನಂದ ಕಾಮತರ ಪೂರ್ವಜರು ಹೊನ್ನಾವರ ಹತ್ತಿರದ ಭಾಸ್ಕೇರಿಯ ಕೃಷಿಕರು. ಕೃಷ್ಣಾನಂದರ ಅಜ್ಜ ವಾಸುದೇವ ಕಮ್ತಿಯವರು ವ್ಯಾಪಾರ ನಡೆಸುವ ಉದ್ದೇಶದಿಂದ ಹೊನ್ನಾವರ ಸೇರಿ ಬಟ್ಟೆ ವ್ಯಾಪಾರ ಪ್ರಾರಂಭಿಸಿದರು. ಇವರ ಮಗ ಲಕ್ಷ್ಮಣ ಕಾಮತ್. ಅವರ ಪತ್ನಿ ರಮಾಬಾಯಿ. ಈ ದಂಪತಿಗಳ ಮೂರನೆಯ ಮಗುವಾಗಿ ಸೆಪ್ಟೆಂಬರ್ 29, 1934ರಂದು ಕೃಷ್ಣಾನಂದ ಹುಟ್ಟಿದರು.

ಆಗಿನ ಕಾಲದಲ್ಲಿ ಮನೆತುಂಬಾ ಮಕ್ಕಳು ಇದ್ದರೂ, ಈಗಿನ ಹಾಗೆ ಊರು ತುಂಬಾ ಶಾಲೆಗಳು ಇರುತ್ತಿರಲಿಲ್ಲ. ಒಂದೂರಿಗೆ ಒಂದು ಅಥವಾ ಎರಡು ಶಾಲೆ. ಅದೂ ತುಂಬಾ ದೂರದಲ್ಲಿ. ಮಳೆ ಇರಲಿ, ಬಿಸಿಲಿರಲಿ ಕಲಿಯುವ ಮಕ್ಕಳು ಹೊಳೆ ದಾಟಿ, ಗುಡ್ಡ, ಕಾಡು ದಾರಿಯನ್ನು ಕಾಲ್ನಡಿಗೆಯಲ್ಲಿ ಕ್ರಮಿಸಿ ಶಾಲೆಗೆ ಹೋಗಬೇಕು. ಹೀಗಾಗಿ ಮಗು ದೈಹಿಕವಾಗಿ, ಮಾನಸಿಕವಾಗಿ ಬೆಳೆದ ನಂತರ ಅದನ್ನು ಶಾಲೆಗೆ ಸೇರಿಸುವ ಪರಿಪಾಠ ಅಂದಿನದು. ಕೃಷ್ಣಾನಂದ ಕಾಮತರು ಕಸಬಾ ಗಂಡುಮಕ್ಕಳ ಶಾಲೆಗೆ ಸೇರಿದಾಗ ಅವರಿಗೆ ಏಳು ವರ್ಷ ಪ್ರಾಯ. ಆಮೇಲೆ ಅವರು ಮಾಧ್ಯಮಿಕ ಶಾಲಾ ಶಿಕ್ಷಣವನ್ನು 'ನ್ಯೂ ಇಂಗ್ಲಿಷ್ ಸ್ಕೂಲ್'ನಲ್ಲಿ ನಡೆಸಿದರು. ಆಮೇಲೆ ಹೆಚ್ಚಿನ ಶಿಕ್ಷಣಕ್ಕೆ ಅವರು ಕುಮಟಾದ

‘ಕೆನರಾ ಕಾಲೇಜು’ ಸೇರಿದರು. ಇಲ್ಲಿ ಅವರಿಗೆ ನಾಲ್ಕು ವರ್ಷಗಳ ಎನ್.ಸಿ.ಸಿ. ಕಠಿಣ ತರಬೇತಿಯಿಂದ ದೇಹದಾರ್ಢ್ಯ ಬೆಳೆದು ಶ್ರಮದಾನದ ಅನುಭವ ದೊರೆಯಿತು.

ಆನಂತರ ಅವರು ಧಾರವಾಡದಲ್ಲಿ ನೆಲೆಸಿ ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರವನ್ನು ಐಚ್ಛಿಕ ವಿಷಯವಾಗಿ ಆಯ್ಕೆ ಮಾಡಿಕೊಂಡು ಕರ್ನಾಟಕ ಕಾಲೇಜಿನಿಂದ ಜೀವಶಾಸ್ತ್ರದಲ್ಲಿ ಬಿ.ಎಸ್‌ಸಿ. ಪದವಿ ಪಡೆದರು. ಆಮೇಲೆ ಅದೇ ವರ್ಷ ಪ್ರಾರಂಭವಾದ ಕೀಟಶಾಸ್ತ್ರದ ಸ್ನಾತಕೋತ್ತರ ಪದವಿಗೆ ಸೇರಿಕೊಂಡರು. ಆಗ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ವಸತಿ ಸೌಕರ್ಯವಿರಲಿಲ್ಲ. ಕೃಷ್ಣಾನಂದರು ಪದವೀಧರರ ಜೀವನ ಶಿಕ್ಷಣ ಕೇಂದ್ರದ ವಿದ್ಯಾರ್ಥಿಯಾಗಿ ಸೇರಿ ವಸತಿ ಸಮಸ್ಯೆಯನ್ನು ಬಗೆಹರಿಸಿಕೊಂಡರು! ಸ್ನಾತಕೋತ್ತರ ಪದವಿಯ ಒಂದು ವರ್ಷ ಮುಗಿಯುವುದರೊಳಗೆ ಅವರು ಒಂದು ವರ್ಷದ ಬಿ.ಎಡ್ ಹಾಗೂ ಜೀವನ ಶಿಕ್ಷಣದ ಸಮ್ಮಿಶ್ರ ಕೋರ್ಸ್ ಮುಗಿಸಿ ಪ್ರಥಮ ದರ್ಜೆಯಲ್ಲಿ ಉತ್ತೀರ್ಣರಾದರು. ಜೀವನ ಶಿಕ್ಷಣ ತರಬೇತಿಯಲ್ಲಿ ಅವರಿಗೆ ನೂಲುವುದು, ಹಾಸು ಹಾಕುವುದು, ಏಂಕಿ ಮಾಡುವುದು, ನೇಯುವುದು, ರಟ್ಟಿನ ಕೆಲಸ, ಬಡಿಗೆತನ ಕರಗತವಾದವು.

1959ರಲ್ಲಿ ಉತ್ತಮ ಅಂಕಗಳೊಂದಿಗೆ ಎಂ.ಎಸ್‌ಸಿ. ಮುಗಿಸಿದ ಅವರು ಕರ್ನಾಟಕ ಕಾಲೇಜಿನಲ್ಲಿ ಶಿಕ್ಷಕರಾಗಿ ಸೇರಿದರು. ಆದರೆ ಕೀಟಶಾಸ್ತ್ರದಲ್ಲಿ ಅಧ್ಯಯನವನ್ನು ಮುಂದುವರಿಸಿ ಸಂಶೋಧನೆ ನಡೆಸುವುದರಲ್ಲಿ ಆಸಕ್ತಿ ಮೂಡಿದ್ದರಿಂದ ಪಿಹೆಚ್.ಡಿ.ಗೆ ತಮ್ಮ ಹೆಸರು ನೋಂದಾಯಿಸಿದರು. ಅವರ ಕಲಿಯುವ ಉತ್ಸಾಹ ಹಾಗೂ ಮೇಧಾವಿತನಕ್ಕೆ ಅಮೇರಿಕೆಯ ನ್ಯೂಯಾರ್ಕ್ ವಿಶ್ವವಿದ್ಯಾಲಯಕ್ಕೆ ಸೇರಿದ ಪರಿಸರ ವಿಜ್ಞಾನ ಮತ್ತು ಅರಣ್ಯಶಾಸ್ತ್ರದ ಪ್ರಸಿದ್ಧ ಕಾಲೇಜು ಸಾಯರೆಕ್ಯೂಸ್ ಮಹಾವಿದ್ಯಾಲಯದಲ್ಲಿ ಶಿಷ್ಯವೃತ್ತಿಯೊಂದಿಗೆ ‘ಕೀಟಶಾಸ್ತ್ರ’ದಲ್ಲಿ ಪಿಹೆಚ್.ಡಿ.ಗೆ ಪ್ರವೇಶ ಸಿಕ್ಕಿತು; ರಾಕ್‌ಫೆಲರ್ ವಿದ್ಯಾರ್ಥಿವೇತನ ದೊರೆಯಿತು.

ಯುರೋಪು ಮಾರ್ಗವಾಗಿ ಅಮೇರಿಕೆಗೆ ಪ್ರಯಾಣ ಬೆಳೆಸಿದ ಕೃಷ್ಣಾನಂದರು ತಮ್ಮ ಎರಡು ವರ್ಷಗಳ ವಿದೇಶಿ ವಾಸ್ತವ್ಯದಲ್ಲಿ

‘ಸಸ್ಯದ ಕೀಟಾಣು ಬೆಳವಣಿಗೆ’ ವಿಷಯದಲ್ಲಿ ಸಂಶೋಧನೆಯನ್ನು ನಡೆಸಿ ಪಿಹೆಚ್.ಡಿ. ಪಡೆದರು. ಅದೇ ಅವಧಿಯಲ್ಲಿ ಅಮೇರಿಕ ಸರ್ಕಾರದ ಕೃಷಿ ಖಾತೆ ಆಯೋಜಿಸಿದ್ದ ಅರಣ್ಯವೀಕ್ಷಣೆಯ ತರಬೇತಿಗೆ ಸೇರಿ 35 ರಾಜ್ಯಗಳನ್ನು ಸುತ್ತಾಡುತ್ತಾ 22 ರಾಜ್ಯಗಳ ಅರಣ್ಯರಕ್ಷಣೆಯ ವೀಕ್ಷಣೆ ಮತ್ತು ಅಧ್ಯಯನ ನಡೆಸಿದರು. ಹೀಗೆ ಕೃಷ್ಣಾನಂದ ಕಾಮತರು ಸಸ್ಯಪೋಷಣೆ, ಕೀಟ ನಿಯಂತ್ರಣ ಹಾಗೂ ಪರಿಸರ ರಕ್ಷಣೆಯ ಕ್ಷೇತ್ರಗಳಲ್ಲಿ ಪರಿಣತಿ ಹೊಂದಿದರು. ಅವರು ಕಲಿತ ವಿಶ್ವವಿದ್ಯಾಲಯದಲ್ಲಿ ಕೆಲಸಕ್ಕೆ ಸೇರುವಂತೆ ಅಮೇರಿಕೆಯ ಪ್ರಾಧ್ಯಾಪಕರಿಂದ ಸೂಚನೆ ಬಂತು.

ಆ ಕಾಲದಲ್ಲಿ ಉನ್ನತ ಶಿಕ್ಷಣ ಅಥವಾ ಉದ್ಯೋಗದ ನಿಮಿತ್ತವಾಗಿ ಅಮೇರಿಕೆಗೆ ಹೋದ ಭಾರತೀಯ ಯುವಜನಾಂಗ, ಅಲ್ಲಿಯ ಸ್ವಚ್ಛಂದ ಬದುಕು ಹಾಗೂ ಕೈತುಂಬ ಸಿಗುವ ವೇತನದ ಆಮಿಷಕ್ಕೆ ಒಳಗಾಗಿ ಸ್ವದೇಶಕ್ಕೆ ಹಿಂತಿರುಗುವ ಮನಸ್ಸು ಮಾಡುತ್ತಿರಲಿಲ್ಲ. ‘ಪ್ರತಿಭಾ ಪಲಾಯನ’ ಪ್ರವೃತ್ತಿ ಗಣನೀಯ ಪ್ರಮಾಣದಲ್ಲಿ ಚಲಾವಣೆಯಲ್ಲಿದ್ದಂತಹ ಸಂದರ್ಭವದು. ಆದರೆ ಕೃಷ್ಣಾನಂದರು ಉನ್ನತ ಶಿಕ್ಷಣ ಪಡೆಯುವ ಉದ್ದೇಶ ನೆರವೇರಿದ ಕೂಡಲೇ ಭಾರತಕ್ಕೆ ಮರಳಿದರು. 1965ರಲ್ಲಿ ತಾನು ತಾಯ್ನೆಲಕ್ಕೆ ಹಿಂತಿರುಗಿದ ಹಿನ್ನೆಲೆ ಕುರಿತು ಅವರದೇ ಮಾತಿನಲ್ಲಿ ಹೇಳುವುದಾದರೆ, ‘ಕೈತುಂಬಾ ಸಂಬಳ ತರುವ ವೃತ್ತಿಯನ್ನು ಹಿಡಿದು ಅಲ್ಲೇ ನೆಲೆಸಬಹುದಾಗಿತ್ತು. ಆದರೆ ನಾನು ಹುಟ್ಟಿ ಬೆಳೆದ ನೆಲ-ಜಲ ಕೈ ಬೀಸಿ ಕರೆಯುತ್ತಿತ್ತು. ಬೇರೊಂದು ದೇಶದಲ್ಲಿ ಪರಕೀಯನಾಗಿ ಬಾಳಲು ಮನಸ್ಸು ಬಾರದೇ ಸ್ವದೇಶಕ್ಕೆ ಮರಳಿದೆ. ಅರಣ್ಯಶಾಸ್ತ್ರದ ಡಾಕ್ಟರೇಟ್, ವಿಶೇಷ ತರಬೇತಿಗಳ ಪ್ರಯೋಜನ ನನ್ನ ನಾಡಿಗೆ, ಜಿಲ್ಲೆಗೆ ದೊರೆಯಲಿ ಎಂಬುದು ನನ್ನ ಆಗಿನ ಕನಸಾಗಿತ್ತು.’ ಇನ್ನು ದುಡ್ಡು ಗಳಿಸಿ ಧನಿಕನಾಗುವ ಮನಸ್ಥಿತಿ ಅವರಲ್ಲಿ ಇದ್ದಿದ್ದರೆ ಅವರು ಭಾರತಕ್ಕೆ ಮರಳಿದ ಬಳಿಕ ವಂಶ ಪರಂಪರಾಗತವಾಗಿ ಬಂದ ಬಟ್ಟೆ ವ್ಯಾಪಾರವನ್ನು ಮುಂದುವರಿಸಬಹುದಿತ್ತು ಅಥವಾ ದೊಡ್ಡದೊಂದು ಸಂಸ್ಥೆ ಸೇರಿ ಉನ್ನತ ಹುದ್ದೆಯನ್ನು ಪಡೆಯ ಬಹುದಿತ್ತು. ಆದರೆ ಅವರ ಅಭಿಮತದಲ್ಲಿ ‘ಹೊಟ್ಟೆ ಹೊರೆಯುವುದಕ್ಕಾಗಿ

ಶಿಕ್ಷಣ ಎಂದು ಹೇಳುವುದು ತಪ್ಪು ಗ್ರಹಿಕೆ. ವಿದ್ಯಾಭ್ಯಾಸದ ಮೂಲ ಉದ್ದೇಶ ಮಾನವನ ಮಾನಸಿಕ ವಿಕಾಸ. ಮಾನವನಿಗೆ ಸುಖ-ಸಂಪತ್ತುಗಳಿಗಿಂತ ಆತ್ಮಗೌರವ, ದೇಶಾಭಿಮಾನಗಳು ಹೆಚ್ಚಿನ ನೆಮ್ಮದಿ ಕೊಡಬಲ್ಲವು. ಹಣಸಂಪಾದನೆಗಾಗಿ ಯಾಂತ್ರಿಕವಾಗಿ ಜೀವಿಸುವುದೆಂದರೆ ಆದರ್ಶಗಳಿಗೆ ತಿಲಾಂಜಲಿ ಕೊಟ್ಟಂತೆ'.

ಹೀಗೆ ಡಾ॥ ಕೃಷ್ಣಾನಂದ ಕಾಮತರು ಇತರರಿಗಿಂತ ಭಿನ್ನವಾಗಿ ಬದುಕಿ ಸಾಧಿಸಬೇಕೆಂಬ ಕನಸು ಹೊತ್ತು ಸ್ವದೇಶದ ನೆಲದ ಮೇಲೆ ಕಾಲಿಟ್ಟರು.

* * *

ಸ್ವದೇಶಕ್ಕೆ ಮರಳಿ ಬಂದ ಕೃಷ್ಣಾನಂದರು ಭಾರತ ಸರಕಾರದ ಯೋಜನೆಯೊಂದರ ಫಲಾನುಭವಿಯಾಗಿ ರಾಜಸ್ಥಾನದ ಉದಯಪುರ ಕೃಷಿ ವಿಶ್ವವಿದ್ಯಾನಿಲಯದ ಕಾಲೇಜಿನಲ್ಲಿ ಕೀಟಶಾಸ್ತ್ರ ಕಲಿಸುವ ಅಧ್ಯಾಪಕರಾಗಿ ಸೇರಿ ತಮ್ಮ ವೃತ್ತಿ ಜೀವನ ಪ್ರಾರಂಭಿಸಿದರು. ಅವರ ವಾಸ ಕುಗ್ರಾಮ ಜೋಬನೇರ್‌ನಲ್ಲಿ. ಮೂಲಭೂತ ಸೌಕರ್ಯವೂ ಇಲ್ಲದ ಈ ಕಗ್ಗಳ್ಳಿಯಲ್ಲಿ ಅವರ ಪ್ರತಿಭೆಗೆ ತಕ್ಕ ಮನ್ನಣೆ ದೊರೆಯಲಿಲ್ಲ. 1965ರಿಂದ 1968ರವರೆಗೆ ಕೃಷಿ ಕಾಲೇಜಿನಲ್ಲಿ ಸೇವೆ ಸಲ್ಲಿಸಿದ ನಂತರ ಅವರು ಕೆಲಸ ಬಿಟ್ಟು, ಪಶ್ಚಿಮ ಬಂಗಾಲದ ಇತಿಹಾಸ ಪ್ರಸಿದ್ಧ ಪ್ಲಾಸಿಯಲ್ಲಿರುವ ಕಾಮನ್ ವೆಲ್ತ್ ಇನ್ಸ್ಟಿಟ್ಯೂಟ್ ಆಫ್ ಬಯಲಾಜಿಕಲ್ ಕಂಟ್ರೋಲ್ ಸಂಸ್ಥೆಯಲ್ಲಿ ಕೀಟ ಸಂಶೋಧನಾಧಿಕಾರಿಯಾಗಿ, ಕೇಂದ್ರದ ಮುಖ್ಯಸ್ಥರಾಗಿ ಸೇರಿದರು.

ಪ್ರಕೃತಿಯ ಆರಾಧಕರಾಗಿದ್ದ ಕೃಷ್ಣಾನಂದರಿಗೆ ವಂಗದೇಶದ ನಿಸರ್ಗ ಸೌಂದರ್ಯ ಮನಸ್ಸಿಗೆ ಮುದವನ್ನು ಉಂಟುಮಾಡಿತು. ಸಂಸ್ಥೆಯವರು ಬೆಳೆಸಿದ ಕಬ್ಬಿನ ಬೆಳೆಯನ್ನು ಪೀಡಿಸುವ ಕೀಟಗಳ ಅಧ್ಯಯನ ನಡೆಸುವುದು ಅವರ ಪಾಲಿನ ಕೆಲಸ. ಉತ್ತಮ ವೇತನ, ಓಡಾಡಲು ವಾಹನ ಸೌಲಭ್ಯ, ಛಾಯಾಗ್ರಹಣಕ್ಕಾಗಿ ಸಲಕರಣೆಗಳು, ಈ ಮೂಲಕ ಪ್ರಕೃತಿಯ ದರ್ಶನ ಲಾಭ. ಹಳ್ಳಿಪ್ರದೇಶದ ಸಂಚಾರದಿಂದ ಗಂಗೆಯ ಬಯಲು ಪ್ರದೇಶದ ಗ್ರಾಮೀಣ ಜನಜೀವನವನ್ನು, ಬುಡಕಟ್ಟು ಜನಾಂಗ ಸಂತಾಲರನ್ನು ಹತ್ತಿರದಿಂದ ನೋಡುವ, ತಿಳಿದುಕೊಳ್ಳುವ ಅವಕಾಶ. ಮುಂದೆ

ಎಂದಾದರೂ ತೈಲಚಿತ್ರದಲ್ಲಿ ಪರಿಣತಿ ಸಾಧಿಸುವಂತಾದರೆ ಇಲ್ಲಿಯ ಸೃಷ್ಟಿ ಸೌಂದರ್ಯ ಮತ್ತು ಹಳ್ಳಿಹೆಂಗಳೆಯರ ಚೆಲುವನ್ನು ಚಿತ್ರಿಸಬೇಕೆಂಬ ಕನಸು ಕಾಣುತ್ತಾರೆ. ಬಂಗಾಲಿ ಭಾಷೆ ಕಲಿತು ಬಂಗಾಲಿ ಸಾಹಿತ್ಯ ತಿಳಿದುಕೊಳ್ಳುವ ಪ್ರಯತ್ನದಲ್ಲಿ ಅವರಿದ್ದಾಗ ಸಂಯುಕ್ತರಂಗ-ಸರಕಾರ ಅಧಿಕಾರಾರೂಢವಾಗಿ ಬಂಗಾಲದ ರಾಜಕೀಯ ವಾತಾವರಣ ಸಂಪೂರ್ಣವಾಗಿ ಬದಲಾಯಿತು. ಬಂಗಾಲದ ನೆಲದಲ್ಲಿ ಕ್ರಾಂತಿಯ ಕಹಳೆ ಮೊಳಗಿತು. ಸುತ್ತಮುತ್ತ ಸಮಾಜಘಾತಕ ಚಟುವಟಿಕೆಗಳು ಪ್ರಾರಂಭವಾದವು. ಪ್ಲಾಸಿಯ ಕಬ್ಬಿನ ಕಾರ್ಖಾನೆಯ ಕಾರ್ಮಿಕರಲ್ಲಿ ಅಸಂತುಷ್ಟಿ ಹೆಚ್ಚಿತು. ಯುವಜನಾಂಗದ ಉದ್ಧಟತನದ ವರ್ತನೆಯಿಂದ ಪ್ರಾಮಾಣಿಕ ಅಧಿಕಾರಿಗಳಿಗೆ ಉಳಿಗಾಲವಿಲ್ಲವೆಂಬ ಪರಿಸ್ಥಿತಿ ಉಂಟಾಯಿತು. ಇಂತಹ ಪ್ರಕ್ಷುಬ್ಧ ಪರಿಸ್ಥಿತಿಯಲ್ಲಿ ನೆಮ್ಮದಿಯಿಂದ ದಿನ ಕಳೆಯುವುದು ಸಾಧ್ಯವಿರಲಿಲ್ಲ. ಹೀಗಾಗಿ ಕೃಷ್ಣಾನಂದರು ಎರಡೇ ವರ್ಷದಲ್ಲಿ ಪ್ಲಾಸಿ ತೊರೆದು ಕರ್ನಾಟಕಕ್ಕೆ ಹಿಂತಿರುಗಿ ಬರಬೇಕಾಯಿತು. 1970ರಲ್ಲಿ ತಮ್ಮ ನೌಕರಿಗೆ ರಾಜಿನಾಮೆ ನೀಡಿ, ಭವಿಷ್ಯದ ಸ್ಥಿರನೆಲೆಯಾಗಿ ಅವರು ಬೆಂಗಳೂರನ್ನು ಆಯ್ಕೆ ಮಾಡಿಕೊಂಡರು.

ಕರ್ನಾಟಕದಲ್ಲಿ ಕೃಷ್ಣಾನಂದ ಕಾಮತರ ವಿದ್ವತ್ತಿಗೆ ತಕ್ಕ ಉದ್ಯೋಗ ಕೈಗೆಟಕಲಿಲ್ಲ. ಆಗ ಅವರಲ್ಲಿ ತಾನು ಹವ್ಯಾಸವಾಗಿ ಬೆಳೆಸಿಕೊಂಡಿದ್ದ ಛಾಯಾಗ್ರಹಣಕ್ಕೆ ವೈಜ್ಞಾನಿಕ ಸ್ವರೂಪವನ್ನು ನೀಡುವ ಹೊಸ ಆಲೋಚನೆ ಹುಟ್ಟಿಕೊಂಡಿತು. ನೌಕರಿ ಸಿಗದಿದ್ದರೂ ಶಿಕ್ಷಣ ಸಂಶೋಧನೆಗಳ ಸಾಮೀಪ್ಯ ವಿರಲಿ, ತನ್ನ ವೈಜ್ಞಾನಿಕ ಅರಿವನ್ನು ಉಳಿಸಿ, ಬೆಳೆಸಲು ಸಹಕಾರಿಯಾಗಿರಲಿ ಎನ್ನುವ ಉದ್ದೇಶದಿಂದ, ಅವರು 1971ರಲ್ಲಿ ಬೆಂಗಳೂರಿನ ಮಲ್ಲೇಶ್ವರಂ ಬಡಾವಣೆಯಲ್ಲಿ ಸ್ವಂತದ ವೈಜ್ಞಾನಿಕ ಛಾಯಾಚಿತ್ರಗ್ರಹಣ ಪ್ರಯೋಗ ಶಾಲೆಯನ್ನು (ಸೈಂಟಿಫಿಕ್ ಫೋಟೋ ಲ್ಯಾಬ್) ತೆರೆದರು. ಈ ರೀತಿಯ ವೈಜ್ಞಾನಿಕ ಪ್ರಯೋಗಶಾಲೆಯನ್ನು ಖಾಸಗಿಯಾಗಿ ಪ್ರಾರಂಭಿಸಿದವರಲ್ಲಿ ಕೃಷ್ಣಾನಂದರು ಮೊದಲಿಗರು. ಏಕಲವ್ಯನ ಹಾಗೆ ಒಂಟಿಯಾಗಿ ಎಣೆಯಿಲ್ಲದ ಪರಿಶ್ರಮದಿಂದ ಈ ಹೊಸ ಕ್ಷೇತ್ರದಲ್ಲಿ ಕಾರ್ಯಸಿದ್ಧಿ ಪಡೆದರು. ಬೆಂಗಳೂರಿನ ವಿಜ್ಞಾನಸಂಸ್ಥೆ, ನಿಮ್ಹಾನ್ಸ್, ಅಖಿಲ ಭಾರತ ಹೈನುಗಾರಿಕೆ

ಸಂಶೋಧನಾ ಕೇಂದ್ರ, ತೋಟಗಾರಿಕೆ ಸಂಶೋಧನಾ ಕೇಂದ್ರಗಳ ಪ್ರಾಧ್ಯಾಪಕರು, ವಿದ್ಯಾರ್ಥಿಗಳು ಕಾಮತರ ಏಕವ್ಯಕ್ತಿ ಪ್ರಯೋಗಶಾಲೆಯ ಸದುಪಯೋಗ ಪಡೆದುಕೊಂಡರು. 'ನನ್ನ ವೈಜ್ಞಾನಿಕ ತರಬೇತಿಯ ಒಂದಂಶವಾದರೂ ವಿಜ್ಞಾನಿ ಸಮುದಾಯಕ್ಕೆ ಮೀಸಲಿರಲಿ' ಎಂದು ಕಾಮತರು ತನ್ನ ಬಳಿ ಬಂದ ಗ್ರಾಹಕ ವಿದ್ಯಾರ್ಥಿಗಳಿಂದ ಅಲ್ಪ ಸೇವಾಶುಲ್ಕವನ್ನು ಪಡೆಯುತ್ತಿದ್ದರು, ಸದಾ ಸಹಾಯಹಸ್ತ ನೀಡುತ್ತಿದ್ದರು. ನಿಯಮಿತ ವೇತನ ಪಡೆಯುವ ಉದ್ಯೋಗವನ್ನು ಅವಲಂಬಿಸದ ಅವರು ವೈಜ್ಞಾನಿಕ ಛಾಯಾಗ್ರಹಣವನ್ನು ಲಾಭದಾಯಕ ಉದ್ಯಮವಾಗಿ ಬೆಳೆಸದೆ ಕನಿಷ್ಠ ಆದಾಯದಲ್ಲಿ ಅದನ್ನು ನಡೆಸಿದರು. ಇದರಿಂದ ವೈಜ್ಞಾನಿಕ ಛಾಯಾಗ್ರಹಣ ಕ್ಷೇತ್ರದಲ್ಲಿ ಅವರಿಗೆ ಜನಪ್ರಿಯತೆ ದೊರೆಯಿತು. ಮುಂದೆ ಮೂವತ್ತು ವರ್ಷಗಳ ಕಾಲ 'ಕಾಮತ್ ಸೈಂಟಿಫಿಕ್ ಫೋಟೋ ಲ್ಯಾಬ್' ನಿರಂತರವಾಗಿ ನಡೆಯಿತು.

*  *  *

ಕೃಷ್ಣಾನಂದರು ರಾಜಸ್ಥಾನದ ಪುಟ್ಟಹಳ್ಳಿ ಜೋಬನೇರದಲ್ಲಿದ್ದಾಗ ಅವರ ಮದುವೆ ಜ್ಯೋತ್ಸ್ನಾ ಅವರೊಂದಿಗೆ ನಡೆಯಿತು. ಜ್ಯೋತ್ಸ್ನಾ ಪ್ರಸಿದ್ಧ ಬುರ್ಡೆ ಮನೆತನದವರು. ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಪದವೀಧರೆ. ಶಿಕ್ಷಕಿಯಾಗಿ ತಮ್ಮ ವೃತ್ತಿಜೀವನ ಪ್ರಾರಂಭಿಸಿದ ಅವರು ಯು.ಪಿ.ಎಸ್.ಸಿ. ಪರೀಕ್ಷೆಯಲ್ಲಿ ಯಶಸ್ಸು ಪಡೆದು ಧಾರವಾಡದ ಆಕಾಶವಾಣಿ ಕೇಂದ್ರದಲ್ಲಿ ಕಾರ್ಯನಿರ್ವಾಹಕಿಯಾಗಿ ಸೇರಿದರು. ಆಮೇಲೆ ಇತಿಹಾಸದಲ್ಲಿ ಪಿಹೆಚ್.ಡಿ. ಪದವಿ ಪಡೆದರು. ಧಾರವಾಡ, ಮೈಸೂರು, ಬೆಂಗಳೂರು ಆಕಾಶವಾಣಿ ಕೇಂದ್ರದ ನಿರ್ದೇಶಕರಾದರು. ಕೃಷ್ಣಾನಂದ-ಜ್ಯೋತ್ಸ್ನಾರ ವಿವಾಹ 1966ರಲ್ಲಿ ನಡೆಯಿತು.

ಪತಿ ಕೃಷ್ಣಾನಂದರು ಜೋಬನೇರದಲ್ಲಿ. ಪತ್ನಿ ಜ್ಯೋತ್ಸ್ನಾ ಜಯಪುರ ಆಕಾಶವಾಣಿ ಕೇಂದ್ರದಲ್ಲಿ. ಅವರಿಬ್ಬರದು ವಾರಾಂತ್ಯದ ಭೇಟಿ. 1967ರಲ್ಲಿ ಕೃಷ್ಣಾನಂದ-ಜ್ಯೋತ್ಸ್ನಾ ಕಾಮತರ ದಾಂಪತ್ಯದ ಕುಡಿ ವಿಕಾಸನ ಜನನವಾಯಿತು. ಆನಂತರ ಕೃಷ್ಣಾನಂದರು ಬಂಗಾಲ ಸೇರಿ, ಪ್ಲಾಸಿಯಲ್ಲಿ

ಎರಡು ವರ್ಷ ಕಳೆದು ಬೆಂಗಳೂರಿಗೆ ಮರಳಿ ಬಂದರು. ಆದರೆ ಜ್ಯೋತ್ಸ್ನಾ ಕಾಮತ್ ತನ್ನ ವರ್ಗಾವಣೆಯ ನೌಕರಿಯಿಂದ ಕಲ್ಕತ್ತಾ, ಮುಂಬೈ, ಮೈಸೂರು ಮೊದಲಾದ ದೂರ ದೂರದ ಊರುಗಳಲ್ಲಿ ಕಾಲಕಳೆಯುವುದು ಅನಿವಾರ್ಯವಾಗಿತ್ತು. ಹೀಗಾಗಿ ಮೂವತ್ತೆರಡು ವರ್ಷಗಳ ದಾಂಪತ್ಯದಲ್ಲಿ ಹದಿನಾರು ವರ್ಷಗಳನ್ನು ಗಂಡ ಹೆಂಡತಿ ಬೇರೆ ಬೇರೆ ನಗರಗಳಲ್ಲಿ ಕಳೆಯುವಂತಾಗಿತ್ತು. ದೂರವಾಣಿ ಸಂಪರ್ಕ ಸುಲಭವಾಗಿರದ ಆ ದಿನಗಳಲ್ಲಿ ಅವರನ್ನು ಬೆಸೆದದ್ದು ಪತ್ರ ವ್ಯವಹಾರ. ಪತ್ರ ಲೇಖನ ಕೃಷ್ಣಾನಂದರ ಹವ್ಯಾಸಗಳಲ್ಲಿ ಒಂದು. ಪತ್ರ ಬರೆಯುವುದು ಅಭಿವ್ಯಕ್ತಿಯ ಒಂದು ಮಾಧ್ಯಮ, ಸ್ನೇಹದ ಕುರುಹು ಎಂಬ ಭಾವನೆ ಅವರದು. ಮದುವೆ ಗೊತ್ತಾದಾಗ, ಮದುವೆ ನಡೆದ ಬಳಿಕ ದೂರದಲ್ಲಿದ್ದ ಪತ್ನಿಗೆ ದಿನಕ್ಕೊಂದು ಪತ್ರ ಬರೆದ ಭೂಪ ಇವರು. 'ಪ್ರೇಮಗೀತ, ಸಖೀಗೀತಗಳನ್ನು ಬರೆದ ಕವಿಗಳು ಕನ್ನಡದಲ್ಲಿ ಕಡಿಮೆಯಿಲ್ಲ, ಆದರೆ ದಶಕಗಟ್ಟಲೆ ಪತ್ರ ಬರೆಯಲು ಪತ್ನಿಯಲ್ಲಿ ಪ್ರೇಮಿಯನ್ನು ಕಲ್ಪಿಸಿಕೊಂಡವರು ಇರಲಿಕ್ಕಿಲ್ಲ! ಇದಕ್ಕೆ ಅಪವಾದ ತನ್ನ ಪತಿ ಕೃಷ್ಣಾನಂದ ಕಾಮತ್. ನಮ್ಮದು 'ಪತ್ರಸಂಸಾರ'ವೆಂದು ಸಹೋದ್ಯೋಗಿಗಳಿಂದ ಹೇಳಿಸಿಕೊಳ್ಳುತ್ತಿದ್ದೆ' ಎಂದು ಜ್ಯೋತ್ಸ್ನಾ ಕಾಮತ್ ಅಭಿಮಾನದಿಂದ ಹೇಳಿದ್ದಾರೆ. ಅವರು ಪತ್ನಿಗೆ ಬರೆಯುತ್ತಿದ್ದ ಪತ್ರಗಳು ಅವರು ಭೇಟಿಯಾದ ವಿಶೇಷ ವ್ಯಕ್ತಿ, ಓದಿದ ಪುಸ್ತಕ, ಕೇಳಿದ ಸಂಗೀತ, ಬರೆದ ಲೇಖನ, ಹಾಸ್ಯ, ವಿನೋದ, ವಿಚಾರ, ಆದರ್ಶಗಳು ಹೀಗೆ ಒಟ್ಟಿನಲ್ಲಿ ಜೀವನಪಾಠವನ್ನು ಒಳಗೊಂಡಿರುತ್ತಿದ್ದವು. ಹೆಂಡತಿ ಜೊತೆಯಲ್ಲಿದ್ದಾಗ ಪತ್ರ ಬರೆಯುವಿಕೆ ಇಲ್ಲದೇ ಎಷ್ಟೊಂದು ಸ್ವಾರಸ್ಯಕರ ಘಟನೆಗಳು ಹೇಳಹೆಸರಿಲ್ಲದೆ ಮಾಯವಾದವಲ್ಲ ಎಂದು ಕೃಷ್ಣಾನಂದ ಕಾಮತರು ನೊಂದುಕೊಂಡದ್ದೂ ಇದೆ!

ಜ್ಯೋತ್ಸ್ನಾ ಕಾಮತ್ ಕನ್ನಡ, ಕೊಂಕಣಿ, ಇಂಗ್ಲಿಷ್, ಮರಾಠಿ, ಬಂಗಾಲಿ, ಸಂಸ್ಕೃತ ಬಲ್ಲ ಬಹುಭಾಷಾ ಪ್ರವೀಣರು. ಬಹುಭಾಷಾ ಸಾಹಿತ್ಯಾಸಕ್ತರು. ಕನ್ನಡ, ಕೊಂಕಣಿ ಮತ್ತು ಇಂಗ್ಲಿಷ್ ಬರೆವಣಿಗೆಯಲ್ಲಿ ಸಿದ್ಧಹಸ್ತರು. ಹದಿನಾರಕ್ಕೂ ಅಧಿಕ ಕೃತಿಗಳನ್ನು ಪ್ರಕಟಿಸಿದ ಪ್ರಮುಖ ಲೇಖಕಿ. ಅವರು ಪತ್ರಲೇಖನಕ್ಕೆ ಸೀಮಿತವಾಗಿದ್ದ ಪತಿ ಕೃಷ್ಣಾನಂದರಿಗೆ ಸೃಜನಶೀಲ ಬರೆವಣಿಗೆಯಲ್ಲಿ ಆಸಕ್ತಿ

ಹುಟ್ಟಿಕೊಳ್ಳುವಂತೆ ಪ್ರೋತ್ಸಾಹ ನೀಡಿದರು. ಅವರ ಬರೆಹವನ್ನು ತಿದ್ದಿ, ತೀಡಿ ಪ್ರಕಟಣೆಗೆ ಸೂಕ್ತವಾಗಿಸಿದರು. ಇದರಿಂದ ಕೃಷ್ಣಾನಂದರ ಬರೆವಣಿಗೆ ಮೂಸೆಯಲ್ಲಿ ಪುಟಿದೆದ್ದ ಅಪರಂಜಿಯ ಹಾಗೆ ಪ್ರತಿಯೊಬ್ಬರ ಗಮನವನ್ನು ಸೆಳೆಯುವಂತಾಯಿತು. ತನ್ನ ಮೊದಲ ಕೃತಿಗೇ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ವಿಶ್ವವಿದ್ಯಾಲಯದ ಪಠ್ಯವಾಗುವ ಗೌರವವನ್ನು ಅವರು ಪಡೆದರು. ತನ್ನ ಬರೆವಣಿಗೆಯ ಸಾಧನೆಗೆ ಕೃಷ್ಣಾನಂದರು ತಮ್ಮ ಪತ್ನಿಯನ್ನು ಕಾರಣವಾಗಿಸಲು ಹಿಂದೆ ಮುಂದೆ ನೋಡಿಲ್ಲ. ಎಷ್ಟೋ ವರ್ಷಗಳ ಬಳಿಕ ತಮ್ಮ ವಿವಾಹ ವರ್ಧಂತಿಯ ದಿನದಂದು ಅವರು ಅಮೇರಿಕೆಯಲ್ಲಿದ್ದ ತನ್ನ ಮಗನಿಗೆ ಪತ್ರ ಬರೆಯುತ್ತಾ ಹೀಗೆ ಹೇಳುತ್ತಾರೆ – '..ಜ್ಯೋತ್ಸ್ನಾ ತಾನು ಸ್ವತಃ ಬೆಳೆಯುತ್ತ ಬಂದು ನನ್ನ ಆಸಕ್ತಿಗಳನ್ನೂ ಬೆಳೆಸಿಕೊಳ್ಳಲು ಸರ್ವರೀತಿಯಿಂದ ನೆರವಾದಳು. ಅಮೇರಿಕೆಯ ಡಾಕ್ಟರೇಟ್ ಪಡೆದು, ಕೀಟತಜ್ಞ ಅನಿಸಿಕೊಂಡದ್ದು ನನ್ನ ಸಾಧನೆಯಾದರೆ, ಬರಹಗಾರನಾದದ್ದು, ಛಾಯಾಚಿತ್ರಕಾರನಾದದ್ದು ಅವಳಿಂದಲೇ ಎಂದರೆ ಅತಿಶಯೋಕ್ತಿಯಲ್ಲ. ನಮ್ಮಲ್ಲಿ ಹುದುಗಿಕೊಂಡಿರುವ ಕ್ರಿಯಾಶಕ್ತಿ ಹೊರಹೊಮ್ಮಬೇಕಾದರೆ ಅದಕ್ಕೆ ಪ್ರೋತ್ಸಾಹ ಅತ್ಯವಶ್ಯ. ಕಳೆದ ಕಾಲು ಶತಮಾನದಲ್ಲಿ ನಾನು ಬರೆದದ್ದೆಲ್ಲವನ್ನೂ ಚಿಕಿತ್ಸಕವಾಗಿ ಓದಿ ನೋಡಿ, ಮೂಡಿದ ಅಕ್ಷರದೋಷಗಳನ್ನೆಲ್ಲಾ ತಿದ್ದಿ, ಮುದ್ರಣಕ್ಕೆ ಪ್ರತಿ ಮಾಡಿ ಕೊಟ್ಟವಳು ಜ್ಯೋತ್ಸ್ನಾ. ತನ್ನ ಪತ್ನಿ ಇಷ್ಟೊಂದು ಆಸಕ್ತಿ ವಹಿಸದಿದ್ದರೆ, ನಾನು ಲೇಖಕನೆಂದು ಹೆಸರು ಪಡೆಯಲು ಸಾಧ್ಯವೇ ಇರಲಿಲ್ಲ. ಜ್ಯೋತ್ಸ್ನಾಳ ಸಹಾಯ, ಸಹಕಾರಗಳಿಂದ ವೈಜ್ಞಾನಿಕ ಛಾಯಾಗ್ರಹಣವನ್ನು ಕಳೆದ ಎರಡು ದಶಕಗಳಿಂದ ನಡೆಸಿಕೊಂಡು ಬರುವಂತಾಗಿದೆ..'

ಕೃಷ್ಣಾನಂದ ಕಾಮತ್ ಮತ್ತು ಜ್ಯೋತ್ಸ್ನಾ ಕಾಮತರ ಜೋಡಿ ಅನುರೂಪ ದಾಂಪತ್ಯಕ್ಕೊಂದು ಮಾದರಿ.

## ಜೀವನ ಶಿಕ್ಷಣ

ಜೀವನ ಶಿಕ್ಷಣದಲ್ಲಿ ಕ್ರಮಾಗತ ತರಬೇತಿ ಹೊಂದಿದವರು ತಮ್ಮ ಸ್ವಂತ ಜೀವನದಲ್ಲಿ ಅದನ್ನು ಅಳವಡಿಸಿಕೊಳ್ಳುವುದು ತುಂಬಾ ಕಡಿಮೆ. ಆದರೆ

ಕಾಲೇಜು ಮಟ್ಟದಲ್ಲಿ ಜೀವನ ಶಿಕ್ಷಣದ ಪದವಿ ಪಡೆದು, ಅದಕ್ಕಿಂತಲೂ ಹೆಚ್ಚಿನ ಅನುಭವವನ್ನು ಬದುಕಿನಿಂದಲೇ ನೇರವಾಗಿ ಪಡೆದು ಸರಳ ಬದುಕಿನ ಮಾರ್ಗವನ್ನು ರೂಪಿಸಿಕೊಂಡವರು ಕೃಷ್ಣಾನಂದ ಕಾಮತ್.

ಜೀವನದಲ್ಲಿ ಅತೀವ ಶ್ರದ್ಧೆ ಮತ್ತು ಆಸಕ್ತಿಯನ್ನು ಬೆಳೆಸಿಕೊಂಡು ಅದರ ಆಳವನ್ನು ಅರಿಯಲು ಸದಾಕಾಲ ಹವಣಿಸುತ್ತಿದ್ದ ಮನಸ್ಸು ಅವರದ್ದಾಗಿತ್ತು. ಸರಳವಾದ ಉಡುಗೆ, ಸರಳವಾದ ನಡವಳಿಕೆ ಅವರ ಹೆಗ್ಗುರುತು. ಮಿತಭಾಷಿಯಾಗಿ, ಕಾಡುಹರಟೆಗಳಿಂದ ಮೈಲಿ ದೂರವಿದ್ದು, ಸದಾ ಏನಾದರೂ ಕೆಲಸವನ್ನು ಹಚ್ಚಿಕೊಂಡು ಇರುತ್ತಿದ್ದರು. ತನ್ನ ಸುತ್ತಮುತ್ತಲಿನ ಆಗುಹೋಗುಗಳನ್ನು, ಜನರ ಚಲನವಲನಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದರು. ದೊಡ್ಡಸ್ತಿಕೆ ಎನ್ನುವುದು ಅವರ ಹತ್ತಿರವೂ ಸುಳಿಯುತ್ತಿರಲಿಲ್ಲ. ಸಾಮಾನ್ಯರಿಂದ ಅತೀ ಸಾಮಾನ್ಯರವರೆಗೆ ಎಲ್ಲರೊಂದಿಗೆ ಸಮಾನ ರೀತಿಯಲ್ಲಿ ಬೆರೆಯುವ ಸ್ವಭಾವ. ಅವರ ಪ್ರಕಾರ ಕಷ್ಟದಲ್ಲಿ ಇರುವವರಿಗೆ ನೆರವಾಗುವುದು ಮಾನವಧರ್ಮ. ಜೋಬನೇರ್, ಪ್ಲಾಸಿಯಲ್ಲಿದ್ದಾಗ ತೀರಾ ಬಡತನದಲ್ಲಿ ದಿನ ಕಳೆಯುವವರನ್ನು ನೋಡಿ ಮರುಕ ಪಟ್ಟುಕೊಂಡು ತನ್ನ ಕೈಯಲ್ಲಿ ಸಾಧ್ಯವಾದಷ್ಟು ನೆರವಾಗಿದ್ದುಂಟು. ಕಚೇರಿಯ ಆಳಿನೊಂದಿಗೆ ತನ್ನ ಬುತ್ತಿ ಊಟವನ್ನು ಹಂಚಿಕೊಳ್ಳಲು ಹಿಂದೆ ಮುಂದೆ ನೋಡಿದವರಲ್ಲ. 'ನಮ್ಮ ಸುಖ-ಸಂಪತ್ತುಗಳನ್ನು ಅಭಾಗಿಗಳೊಂದಿಗೆ ಹಂಚಿಕೊಂಡಾಗಲೇ ಜೀವನಕ್ಕೆ ಒಂದು ಅರ್ಥ ಬರುತ್ತದೆ' ಎಂಬ ನಂಬಿಕೆ ಅವರದು. ತನ್ನ ಆಪ್ತಸ್ನೇಹಿತರ ಉನ್ನತ ವ್ಯಾಸಂಗಕ್ಕೆ, ವಿದೇಶಿ ಪ್ರವಾಸಕ್ಕೆ ಧನಸಹಾಯ ನೀಡಿದ ರೀತಿಯಲ್ಲಿಯೇ ಹಣ್ಣುಮುದುಕಿಯೊಬ್ಬಳು ಭಾರವಾದ ಚೀಲ ಹೊತ್ತು ಹೊರಟಾಗ ಅದನ್ನೆತ್ತಿಕೊಂಡು ಮನೆಗೆ ಮುಟ್ಟಿಸಿದ್ದು, ಕಬ್ಬು ಹೇರಿದ ಚಕ್ಕಡಿ ಕೆಸರಿನಲ್ಲಿ ಹೂತು ಹೋದಾಗ ಹೊರಗೆಳೆಯುವ ಪ್ರಯತ್ನ ನಡೆಸಿದ್ದು, ಅನಾರೋಗ್ಯದಿಂದ ಬಳಲುತ್ತಿರುವವರಿಗೆ ನೆಮ್ಮದಿಯ ಮಾತುಗಳನ್ನಾಡಿ ಸಂತೈಸಲು ಯತ್ನಿಸಿದ್ದು, ಕಾಯಿಲೆಯವರ ಮಲ-ಮೂತ್ರಗಳನ್ನು ಹೊರಗೊಯ್ದು ಸ್ವಚ್ಛಗೊಳಿಸಲು ಹಿಂದೇಟು ಹಾಕದಿರುವುದು -ಇವೆಲ್ಲವೂ ಅವರ ಸನ್ನಡತೆಯ ಕೆಲವು ಉದಾಹರಣೆಗಳು. ದಾನಶೀಲತೆಯನ್ನು

ವೈಭವೀಕರಿಸದೆ, ಅದು ನಿತ್ಯದ ಸಂಗತಿಗಳಲ್ಲಿ ಒಂದು ಎಂಬ ನಡವಳಿಕೆಯನ್ನು ರೂಢಿಸಿಕೊಂಡಿದ್ದ ಕೃಷ್ಣಾನಂದರು ಈ ಪ್ರವೃತ್ತಿ ತನ್ನಲ್ಲಿ ಸದಾಕಾಲ ಉಳಿದುಕೊಂಡಿರಲಿ, ನಿರ್ಭಾಗ್ಯರ ಹೃದಯದಲ್ಲಿ ನಮ್ಮಂಥವರಿಗೆ ಸ್ಥಾನವಿರುತ್ತಲ್ಲ ಅಷ್ಟು ಸಾಕು ಎನ್ನುತ್ತಿದ್ದ ಸಹೃದಯಿ.

ಸಾಮಾನ್ಯವಾಗಿ ಅಧಿಕಾರಿವರ್ಗದಲ್ಲಿ ಕಾಣದ ಎರಡು ಅಪರೂಪದ ಅಂಶಗಳು ಕೃಷ್ಣಾನಂದರ ವ್ಯಕ್ತಿತ್ವದಲ್ಲಿದ್ದವು. ಅವುಗಳೆಂದರೆ ಅಡುಗೆ ತಯಾರಿಕೆ ಹಾಗೂ ಗುಜರಿ ನಿರ್ವಹಣೆ. ಆಪ್ತವಲಯದಲ್ಲಿ ತಮ್ಮ ರುಚಿಕಟ್ಟಾದ ಅಡುಗೆಗಾಗಿಯೇ ಪ್ರಸಿದ್ಧರಾಗಿದ್ದವರು ಕೃಷ್ಣಾನಂದ ಕಾಮತ್. ಅವರು ಸಿಹಿತಿಂಡಿ ಹಾಗೂ ಉಪ್ಪಿನಕಾಯಿ ತಯಾರಿಕೆಯಲ್ಲಿ ಎತ್ತಿದ ಕೈ. ತಾನು ಮತ್ತು ತನ್ನ ಮಡದಿ ದೂರದೂರದ ಊರುಗಳಲ್ಲಿ ಪ್ರತ್ಯೇಕವಾಗಿ ವಾಸವಾಗಿರುವಾಗ ನಿತ್ಯದ ಅಡುಗೆ ಸಿದ್ಧಪಡಿಸಿಯೇ ಅವರು ಕೆಲಸಕ್ಕೆ ಹೋಗುತ್ತಿದ್ದರು. ಮಡದಿಯ ಬಯಕೆಯೂಟಕ್ಕೆ ಬಾಸುಂದಿ, ಫ್ರೂಟ್‌ಸಲಾಡ್, ಪಲ್ಯ, ತಾಳ್ಳು, ಹಪ್ಪಳ, ಸಂಡಿಗೆ, ವಡೆ, ಉಪ್ಪಿನಕಾಯಿ, ಪೂರಿ, ಭಜಿಗಳ ಆಕರ್ಷಕ ಮೆನು ತಯಾರಿಸಿದವರು!

ಗೃಹೋಪಕರಣಗಳ ದುರಸ್ತಿ ಹಾಗೂ ಗುಜರಿಯಿಂದ ಆಯ್ದು ತಂದ ವಸ್ತುಗಳ ಮರುಬಳಕೆ ಬಿಡುಸಮಯ ಕಳೆಯುವ ಅವರ ಸಾಧನಗಳು. ತಾನು ಕಲಿತ ಮರಗೆಲಸ, ಮಣ್ಣಿನ ಕೆಲಸ, ನೇಯ್ಗೆ, ಹೊಲಿಗೆ, ತೋಟಗಾರಿಕೆಗಳನ್ನು ಪ್ರಾಯೋಗಿಕ ನೆಲೆಯಿಂದ ಅಳವಡಿಸಿಕೊಂಡಿದ್ದರು. ರಜಾದಿನಗಳಲ್ಲಿ ಬೀದಿಬದಿ ವ್ಯಾಪಾರಸ್ಥರಿಂದ ಗುಜರಿ ವಸ್ತುಗಳನ್ನು ಆಯ್ದು ತಂದು ಅವುಗಳನ್ನು ತಮ್ಮ 'ಗುಜರಿ ಗೋದಾಮಿ'ಗೆ ಸೇರಿಸುವುದು. ಸಮಯ ದೊರೆತಾಗ ಅವುಗಳಿಗೆ ಮರುಜನ್ಮ ನೀಡುವುದು. ಈ ಕೆಲಸದಲ್ಲಿ ಅವರಿಗೆ ಎಲ್ಲಿಲ್ಲದ ಆಸಕ್ತಿ, ಹುರುಪು. ಕೇಳುವವರಿಲ್ಲದೆ ಬಿದ್ದುಕೊಂಡ ವಸ್ತುಗಳು ಅಗ್ಗವಾಗಿ ಅವರ ಕೈಸೇರಿ ಅಪ್ರತಿಮ ಸಿದ್ಧ ಸರಕುಗಳಾಗಿಬಿಡುತ್ತಿದ್ದವು. ಅವರ ಈ ಹವ್ಯಾಸದ ಕುರಿತು ಕವಿ ವಿ. ಜಿ. ಭಟ್ಟ್ ಒಂದು ಕವನವನ್ನೇ ಹೊಸೆದಿದ್ದಾರೆ. ಅದರ ಪ್ರಾರಂಭ ಹೀಗಿದೆ: *ಕೃಷ್ಣಾನಂದಗೆ ಗುಜರಿ ಗುತ್ತಿಗೆ/*

ಹೊತ್ತು ತರುವ ಹಳೆ ರದ್ದಿ/ಉಳುಕಿದರೂನೂ ಆತನ ಕುತ್ತಿಗೆ/ತಪ್ಪದೆ ಹೊರುವನು ಜಿದ್ದಿ/ಪತ್ನಿ ಜ್ಯೋತ್ಸ್ನಾ ಕಾಮತರು ಪತಿಯ ಈ ಹವ್ಯಾಸವನ್ನು 'ಗುಜರಿ ಗುತ್ತಿಗೆ' ಲೇಖನವಾಗಿಸಿ ಹಾಸ್ಯದ ಹೊಳೆಯನ್ನೇ ಹರಿಯಬಿಟ್ಟಿದ್ದಾರೆ. ಐಷಾರಾಮಿ ಬದುಕು ಹಾಗೂ ಕೊಳ್ಳುಬಾಕ ಸಂಸ್ಕೃತಿಯ ಕುರಿತು ಕಿಂಚಿತ್ತೂ ಒಲವು ತೋರದ ಕೃಷ್ಣಾನಂದರು ಯಾರಿಂದಲೂ, ಯಾವುದರಿಂದಲೂ ಏನನ್ನೂ ಅಪೇಕ್ಷಿಸಿದವರಲ್ಲ. ನಿರೀಕ್ಷೆ ಮನುಷ್ಯರಲ್ಲಿ ನಿರಾಶೆಯನ್ನು ಹುಟ್ಟಿಸುತ್ತದೆ ಎಂಬ ಮಾತನ್ನು ಬದುಕಿಗೆ ಅನ್ವಯಿಸಿಕೊಂಡಿದ್ದರಿಂದ ಬದುಕನ್ನು ಸಹನೀಯಗೊಳಿಸುವುದು ಅವರಿಗೆ ಸಾಧ್ಯವಾಯಿತು. ಕೈಗೊಳ್ಳುವ ಕೆಲಸ ಕಾರ್ಯಗಳ ಉದ್ದೇಶ ಹಾಗೂ ಫಲಿತಾಂಶ ಮುಖ್ಯವೆಂದು ಪರಿಗಣಿಸಿದ್ದರಿಂದ ಲಾಭನಷ್ಟಗಳ ಲೆಕ್ಕಾಚಾರದ ಕಡೆಗೆ ಅವರ ಗಮನ ಹರಿಯಲಿಲ್ಲ. ಮನಸ್ಸಿಗೆ ಹಿಡಿಸುವ ನಿಯಮಿತ ವೇತನದ ನೌಕರಿ ಕೈಗೆ ಎಟುಕದಿದ್ದಾಗ, ಅವರು ನಾಳೆಯ ಚಿಂತೆಯಲ್ಲಿ ಎದೆಗುಂದಲಿಲ್ಲ. ಹವ್ಯಾಸಿಯಾಗಿ ಮುಂದುವರಿದರು. ಇದರಿಂದ ಅವರಿಗೆ ವ್ಯವಸ್ಥೆಯ ಕಟ್ಟುಪಾಡು, ಕಾಲದ ನಿರ್ಬಂಧವಿಲ್ಲದೆ ತಮ್ಮ ಆಸಕ್ತಿ ಕ್ಷೇತ್ರವನ್ನು ವಿಸ್ತರಿಸಿಕೊಳ್ಳುವುದು ಸಾಧ್ಯವಾಯಿತು. ಅವರು ಹವ್ಯಾಸಿ ಲೇಖಕರಾದರು, ಹವ್ಯಾಸಿ ಛಾಯಾಚಿತ್ರಗ್ರಾಹಕರಾದರು, ಹವ್ಯಾಸಿ ಸಂಶೋಧಕರೂ ಆದರು! 'ಆನೆ ನಡೆದದ್ದೇ ದಾರಿ' ಎನ್ನುವ ಹಾಗೆ ಕೃಷ್ಣಾನಂದರು ತಾಯ್ನೆಲ ಹೊನ್ನಾವರದಿಂದ ದೂರದ ಬಂಗಾಲದವರೆಗೆ ಸಂಚರಿಸುತ್ತಾ ಮೂಲೆ ಮೂಲೆಗಳಲ್ಲಿ ಹುಡುಕಾಡಿ ಅಪರೂಪದ ವಿದ್ಯಮಾನಗಳನ್ನು ಬೆಳಕಿಗೆ ತಂದರು. ಇದಕ್ಕೆ ಉತ್ತಮ ಉದಾಹರಣೆ ಅವರು ಕರಾವಳಿಯ ಕಾವಿಕಲೆಯನ್ನು ಮುಖ್ಯವಾಹಿನಿಗೆ ಪರಿಚಯಿಸಿದ ರೀತಿ ಹಾಗೂ ಪ್ಲಾಸಿಯ ಇರುವೆಗಳ ಬದುಕನ್ನು ಕಂಡರಸಿದ ವಿಧಾನ. ಎಲ್ಲಿಯ ಇರುವೆ, ಎಲ್ಲಿಯ ಕಾವಿಕಲೆ! ಇದು ಕೃಷ್ಣಾನಂದರಂತಹ ಕುತೂಹಲಿ, ಸಂಸ್ಕೃತಿಪ್ರಿಯ ಸಂಶೋಧಕರಿಂದ ಮಾತ್ರ ಸಾಧ್ಯವಾಗುವಂತಹದು.

ಸರಳವಾಗಿ ಬದುಕುವುದು ಹೇಗೆ ಎನ್ನುವುದಕ್ಕೆ ಮಾದರಿ ಕೃಷ್ಣಾನಂದರ ಬದುಕು.

# ಏಕವ್ಯಕ್ತಿ–ಬಹುಮುಖ ಪ್ರತಿಭೆ

ವ್ಯಕ್ತಿಯೊಬ್ಬರು ಏಕಕಾಲದಲ್ಲಿ ಹಲವು ಕ್ಷೇತ್ರಗಳಲ್ಲಿ ಪ್ರವೇಶ ಪಡೆದು ಸಾಧನೆಯನ್ನು ದಾಖಲಿಸುವುದು ಕಷ್ಟಸಾಧ್ಯ. ವೃತ್ತಿ–ಪ್ರವೃತ್ತಿಯೆಂದು ಎರಡು ಕ್ಷೇತ್ರಗಳಲ್ಲಿ ಸಾಧನೆ ಮಾಡಿದವರು ಅನೇಕ ಮಂದಿ ಇರುತ್ತಾರೆ. ಆದರೆ ಎರಡಕ್ಕಿಂತ ಹೆಚ್ಚು ಕ್ಷೇತ್ರಗಳಲ್ಲಿ ದುಡಿದು ಯಶಸ್ಸು ಪಡೆದವರು ಅತೀ ವಿರಳ. ಈ ಸಾಧನೆಯನ್ನು ಮಾಡಿ ತೋರಿಸಿದವರು ಡಾ॥ ಕೃಷ್ಣಾನಂದ ಕಾಮತ್.

ಜೀವಶಾಸ್ತ್ರದಲ್ಲಿ ಅತ್ಯುನ್ನತ ಪದವಿ ಪಡೆದ ಕೃಷ್ಣಾನಂದರು ಸಾಂಸ್ಥಿಕ ನೆಲೆಯಿಂದ ಮತ್ತು ವೈಯಕ್ತಿಕ ನೆಲೆಯಿಂದ ಸಸ್ಯ ಪ್ರಪಂಚ ಮತ್ತು ಪ್ರಾಣಿ ಪ್ರಪಂಚದ ಸಂಶೋಧನೆ, ಅಧ್ಯಯನವನ್ನು ಕೈಗೊಂಡರು. ಇರುವೆ, ತಗಣಿ, ಪತಂಗ, ಕಾಗೆ, ಹಾವು, ಹಾವಸೆ, ಗಿಡ, ಮರಗಳ ಕುರಿತು ವಸ್ತುನಿಷ್ಠ ಪ್ರಬಂಧಗಳನ್ನು ಬರೆದು ಪ್ರಕಟಿಸಿ ಸಾಮಾನ್ಯ ಓದುಗರಲ್ಲಿ ತಮ್ಮ ತಿಳಿವಳಿಕೆ, ಜ್ಞಾನವನ್ನು ಹಂಚಿಕೊಂಡರು. ಅವರು ಬಾಲ್ಯದಿಂದ ರೂಢಿಸಿ ಬಂದಂತಹ ಎರಡು ಹವ್ಯಾಸಗಳು ಪ್ರವಾಸ ಮತ್ತು ಚಿತ್ರಕಲೆ. ಓರ್ವ ವಿಜ್ಞಾನಿಯಾಗಿ ಹಾಗೂ ದೇಶ, ವಿದೇಶಗಳನ್ನು ಸಂದರ್ಶಿಸುವ ಸಹಜ ಕುತೂಹಲಿಯಾಗಿ ಅವರು ಕ್ಷೇತ್ರಕಾರ್ಯವನ್ನೂ ಸ್ವಯಂಪ್ರೇರಿತ ಪ್ರವಾಸಗಳ ರೂಪದಿಂದ ನಡೆಸಿ, ಅನುಭವಿಸಿ ತಾನು ಕಂಡ ಜಗತ್ತಿನ, ಮಾನವ ಬದುಕಿನ ವಿಧಾನಗಳನ್ನು ಹಲವು ಗ್ರಂಥ ರೂಪಗಳಲ್ಲಿ ಪ್ರಕಟಿಸಿದರು. ಜಗತ್ತಿನಲ್ಲಿಯೇ ಅತ್ಯಂತ ಮುಂದುವರಿದ ದೇಶವಾದ ಅಮೇರಿಕೆಯಿಂದ ಹಿಡಿದು ರಾಜಸ್ಥಾನದ ಕಗ್ಗಳ್ಳಿ ಜೋಬನೇರ್‌ವರೆಗೆ ಮಾನವ ತನ್ನ ಪರಿಸರಕ್ಕೆ ತಕ್ಕ ಹಾಗೆ ತನ್ನ ಬದುಕನ್ನು ಯಾವ ರೀತಿಯಲ್ಲಿ ರೂಪಿಸಿಕೊಳ್ಳುತ್ತಾನೆ ಎಂಬುದನ್ನು ಓರ್ವ ಮಾನವತಾವಾದಿಯ ದೃಷ್ಟಿಯಿಂದ ದಾಖಲಿಸಿದರು. ಹೋದೆಡೆಗಳಲ್ಲೆಲ್ಲಾ ಅವರು ಕ್ಲಿಕ್ಕಿಸಿದ ಛಾಯಾಚಿತ್ರಗಳು ಮಾನವಶಾಸ್ತ್ರಕ್ಕೆ ಅಪೂರ್ವ ಕೊಡುಗೆಯಾದವು. ನಿರಂತರ ಪ್ರವಾಸಗಳು, ಅಧ್ಯಯನಗಳು ಅವರಲ್ಲಿ ಪರಿಸರದ ಕಾಳಜಿಯನ್ನು ಮೂಡಿಸಿ ಅವರ ವ್ಯಕ್ತಿತ್ವಕ್ಕೆ ಹೊಸ

ಆಯಾಮ ನೀಡಿದ್ದರ ಫಲವಾಗಿ ಕೃಷ್ಣಾನಂದ ಕಾಮತರು ಪರಿಸರತಜ್ಞರಾಗಿ, ಪರಿಸರಪ್ರೇಮಿಯಾಗಿ ರೂಪುಗೊಂಡರು.

ವಿಜ್ಞಾನದ ಬರೆವಣಿಗೆಗಳಿಗೆ ಚಿತ್ರಗಳು ಪೂರಕ ಅಂಶಗಳಾಗಿರುವುದರಿಂದ, ಕೃಷ್ಣಾನಂದರಲ್ಲಿದ್ದ ಹವ್ಯಾಸಿ ಚಿತ್ರಕಲಾವಿದ ಮುನ್ನೆಲೆಯಲ್ಲಿ ಕಾಣಿಸಿಕೊಂಡು ಸಾವಿರಾರು ಚಿತ್ರಗಳನ್ನೊಳಗೊಂಡ 'ಕುಂಚಪ್ರಪಂಚ'ವೊಂದರ ಸೃಷ್ಟಿಯಾಯಿತು. ಸಸ್ಯಜಗತ್ತು, ಪ್ರಾಣಿಜಗತ್ತಿನ ದಾಖಲೀಕರಣಕ್ಕಾಗಿ ಲೇಖನಿಯನ್ನು ಕೈಗೆತ್ತಿಕೊಂಡಾಗ ಅವರಲ್ಲಿ ಹುದುಗಿದ್ದ ಸೃಜನಶೀಲ ಪ್ರತಿಭೆ ಮುನ್ನೆಲೆಯಲ್ಲಿ ಕಾಣಿಸಿಕೊಂಡಿತು. ಗಹನವಾದ ವಿಚಾರಗಳಿಗೆ ಸರಳ, ಆಪ್ತವೆನಿಸುವ ಶೈಲಿಯನ್ನು ರೂಢಿಸಿಕೊಂಡರು. ಇದರಿಂದ ಅವರ ಶಾಸ್ತ್ರಗ್ರಂಥಗಳು, ಪ್ರವಾಸ ಕಥನಗಳು ವರದಿರೂಪ ಕಾಣುವ ಅಪಾಯದಿಂದ ನುಣುಚಿಕೊಂಡು ಲಲಿತಪ್ರಬಂಧಗಳ ರೀತಿಯಲ್ಲಿ ಸಾಮಾನ್ಯ ಓದುಗನನ್ನು ತಲುಪಿ, ಅಧ್ಯಯನದ ಮೂಲ ಉದ್ದೇಶವನ್ನು ಈಡೇರಿಸಿಕೊಂಡವು.

ಬರೆವಣಿಗೆಯಲ್ಲಿ ವಸ್ತುನಿಷ್ಠತೆ ಮತ್ತು ವ್ಯಕ್ತಿನಿಷ್ಠತೆಯನ್ನು ಏಕಪ್ರಕಾರವಾಗಿ ಕಾಯ್ದುಕೊಂಡು ಬಂದಂತಹ ಅಪರೂಪದ ಸಾಹಿತಿ ಕೃಷ್ಣಾನಂದ ಕಾಮತ್.

## ಕಾಮತರು ಕಂಡರಿಸಿದ ಜೀವಜಗತ್ತು

ಇರುವೆಯಂತಹ ಪುಟ್ಟ ಕೀಟವಿರಲಿ ಆನೆಯಂತಹ ಬೃಹತ್ ಪ್ರಾಣಿಯಿರಲಿ, ಜೀವಿಗಳ ಅಧ್ಯಯನವೆಂದರೆ ಅದು ತಾಳ್ಮೆ, ಸಮಯ, ಹಾಗೂ ಪರಿಶ್ರಮ ಬೇಡುವ ಕೆಲಸ. ಮೊದಲು ಜೀವಿಗಳ ನೆಲೆಯನ್ನು, ಅಂದರೆ ಅವು ಬದುಕುವ ಪರಿಸರವನ್ನು ಗುರುತಿಸಬೇಕು. ಆಮೇಲೆ ಅವುಗಳ ದಿನನಿತ್ಯದ ಕಾರ್ಯಚಟುವಟಿಕೆಗಳನ್ನು ಗಮನಿಸಬೇಕು. ಈ ಕಾರ್ಯಚಟುವಟಿಕೆಗಳಲ್ಲಿ ಅವುಗಳ ಆವಾಸಸ್ಥಾನದ ಆಯ್ಕೆ, ಆಹಾರ ಹುಡುಕುವಿಕೆ, ರಕ್ಷಣೋಪಾಯಗಳು, ಸಂಘಟನಾ ಚಾತುರ್ಯಗಳು, ಸಂತಾನಾಭಿವೃದ್ಧಿ ಕಾರ್ಯಗಳು ಮುಖ್ಯವಾಗಿರುತ್ತವೆ.

ಕೃಷ್ಣಾನಂದ ಕಾಮತರು ಎಲ್ಲರಿಗೂ ಚಿರಪರಿಚಿತವಿರುವ ಕೆಲವು ಕೀಟಗಳನ್ನು, ಪಶು ಪಕ್ಷಿಗಳನ್ನು, ಸಸ್ಯಸಂಪತ್ತನ್ನು ಉದಾಹರಣೆಗೆ ಇರುವೆ, ಪತಂಗ, ಕಾಗೆ, ಹಾವು, ಹಾವಸೆ, ಮುಳ್ಳುಕಂಟಿ ಗಿಡ ಇತ್ಯಾದಿಗಳನ್ನು ಆಯ್ದು ತಮ್ಮ ಅಧ್ಯಯನವನ್ನು ನಡೆಸಿದ್ದಾರೆ. ಹಲವು ದಿನಗಳು ಹಾಗೂ ತಿಂಗಳುಗಳವರೆಗೆ ಈ ಜೀವಿಗಳ ಚಲನವಲನಗಳನ್ನು ಹತ್ತಿರದಿಂದ ಗಮನಿಸುತ್ತಾ ಅದನ್ನು ಬರೆವಣಿಗೆ ಹಾಗೂ ಚಿತ್ರಗ್ರಹಣದ ಮೂಲಕ ದಾಖಲಿಸಿದ್ದಾರೆ. ಅಂತಿಮವಾಗಿ ಈ ಜೀವಜಗತ್ತಿನ ಕುರಿತಾಗಿ ತಾನು ತಿಳಿದುಕೊಂಡ ಅನೇಕ ವಿವರಗಳನ್ನು, ಹೊಸ ವಿಚಾರಗಳನ್ನು ವೈಜ್ಞಾನಿಕ ವಿಶ್ಲೇಷಣೆಯ ಮೂಲಕ ಸರಳ ಭಾಷೆಯಲ್ಲಿ ಪುಸ್ತಕರೂಪವಾಗಿ ಪ್ರಕಟಿಸಿದ್ದಾರೆ. ಅವರ 'ಪ್ರಾಣಿಪರಿಸರ', 'ಪಶು–ಪಕ್ಷಿ ಪ್ರಪಂಚ', 'ಕೀಟ ಜಗತ್ತು', 'ಇರುವೆಯ ಇರುವು', 'ಕಾಗೆಯ ಕಾಯಕ', 'ಸರ್ಪ ಸಂಕುಲ', 'ಸಸ್ಯ ಪ್ರಪಂಚ', 'ಸಸ್ಯ ಪರಿಸರ' ಮೊದಲಾದ ಕೃತಿಗಳು ಜೀವಜಗತ್ತಿನ ವಿಸ್ಮಯಾತಿವಿಸ್ಮಯಗಳನ್ನು ಅನಾವರಣಗೊಳಿಸಿವೆ. ಯಃಕಶ್ಚಿತ್ ಎಂದು ನಾವೆಲ್ಲರೂ ಅಲಕ್ಷಿಸುವ ಪುಟ್ಟಜೀವಿ ಇರುವೆಯಲ್ಲಿ, ಕಂಟಕವೆಂದು ದೂರುವ ಕಪ್ಪುಕಾಗೆಯಲ್ಲಿ ಎಷ್ಟೆಲ್ಲಾ ಬುದ್ಧಿವಂತಿಕೆ ಇದೆ ಎಂದು ಮೂಗಿನ ಮೇಲೆ ಕೈಯಿಡುವ ಹಾಗಿನ ವಿವರಗಳು, ವರ್ಷಾನುಗಟ್ಟಳೆ ಸುಪ್ತಾವಸ್ಥೆಯಲ್ಲಿರುವ ಬೀಜಗಳು ಮಣ್ಣು, ನೀರಿನ ಸ್ಪರ್ಶವಾದ ಕೂಡಲೇ ಜೀವತಳೆದು ಚಿಗುರೊಡೆಯುವಂತಹ ಕೌತುಕಗಳು ಕೃಷ್ಣಾನಂದರ ಬರೆವಣಿಗೆಯಲ್ಲಿ ಕಾಣಲು ಸಿಗುತ್ತವೆ. ಮನುಷ್ಯ ಪ್ರಾಣಿಗೆ ಸಹಜವಾದ ಪ್ರೀತಿ–ಪ್ರೇಮ, ಕೋಪ–ತಾಪ, ಮತ್ಸರ, ತ್ಯಾಗ, ಮರುಕ, ಹಗೆಗಳನ್ನು ಪ್ರಾಣಿವರ್ಗದಲ್ಲಿ ಗುರುತಿಸಿದ್ದು ಅವರ ಅಧ್ಯಯನದ ವಿಶೇಷ ಸಂಗತಿಯಾದರೆ, ಮಾನವನ ಮಾನದಂಡದಿಂದ ಈ ಸಹಜೀವಿಗಳನ್ನು ಕಂಡದ್ದು ಕಾಮತರ ವೈಜ್ಞಾನಿಕ ನೆಲೆಯಲ್ಲಿ ನಿಂತ ಸಾಹಿತ್ಯದ ವೈಶಿಷ್ಟ್ಯವೆಂದು ಡಾ॥ ಜ್ಯೋತ್ಸ್ನಾ ಕಾಮತ್ ಗುರುತಿಸಿದ್ದಾರೆ.

ಕೃಷ್ಣಾನಂದ ಕಾಮತರು ಅನಾವರಣಗೊಳಿಸಿದ ಪ್ರಾಣಿ ಜಗತ್ತಿನ ಕೆಲವು ವಿಸ್ಮಯ, ಕೌತುಕಗಳನ್ನು ತಿಳಿದುಕೊಳ್ಳೋಣ.

## ಕೋಟಿ ಕೀಟಗಳ ಕೀಟಲೆಗಳು

ಈ ಜಗತ್ತಿನಲ್ಲಿ ಕೀಟಗಳು ಕಾಣಲು ಸಿಗದ ಜಾಗವೇ ಇಲ್ಲವೆನ್ನಬಹುದು. ಮನುಷ್ಯ ಇರುವೆಡೆ ಕೀಟಗಳೂ ಇರುತ್ತವೆ. ಮನುಷ್ಯನಿಗೆ ಕೀಟಗಳು ಕಚ್ಚಿ ನೋಯಿಸಿದಾಗ, ಅವನು ಕಾದಿಟ್ಟ ವಸ್ತುಗಳನ್ನು, ನೆಟ್ಟು ಬೆಳೆಸಿದ ಬೆಳೆಗಳನ್ನು ಅವು ಹಾಳುಗೆಡವಿದಾಗ ಕೀಟಗಳ ಮೇಲೆ ಮನುಷ್ಯನಿಗೆ ದ್ವೇಷ ಸಹಜವಾಗಿ ಹುಟ್ಟುತ್ತದೆ. ಅವುಗಳನ್ನು ನಾಶಪಡಿಸುವ ಚತುರೋಪಾಯಗಳನ್ನು ಅವನು ಸೃಷ್ಟಿಸಿಕೊಳ್ಳುತ್ತಾನೆ. ಆದರೆ ಕೀಟಗಳ ವಿಸ್ಮಯಕಾರಿ ಲೋಕವನ್ನು ಹತ್ತಿರದಿಂದ ಗಮನಿಸಿದರೆ ಅವುಗಳ ಚುರುಕುತನ, ಬುದ್ಧಿವಂತಿಕೆಯ ಕುರಿತು ಪ್ರೀತಿ ಹುಟ್ಟದೇ ಇರದು. ಅದರಲ್ಲಿಯೂ ಮಕ್ಕಳಿಗೆ ಕೀಟಗಳೆಂದರೆ ವಿಶೇಷ ಮೋಹ, ಆಕರ್ಷಣೆ. ಚಿಕ್ಕಂದಿನಲ್ಲಿ ಎಲೆಕೀಟಗಳನ್ನು ಕುತೂಹಲದಿಂದ ಹಿಂಬಾಲಿಸಿ ಹೋಗುವುದು, ಮಿಡತೆಗಳ ಉದ್ದುದ್ದ ಕಾಲಿಗೆ ದಾರ ಕಟ್ಟಿ ಹಾರಲು ಬಿಡುವುದು, ಎಲೆಗಳಲ್ಲಿ ಕಂಡುಬರುವ ಮೊಟ್ಟೆ, ಕೋಶಗಳನ್ನು ಬೆಂಕಿಪೆಟ್ಟಿಗೆಗಳಲ್ಲಿ ಇಟ್ಟು ಪತಂಗ ಹೊರಬರುವುದನ್ನು ಕಾಯುವುದು ಬಹುತೇಕರ ಅನುಭವಕ್ಕೆ ಬಂದಿರುವ ಸಂಗತಿಗಳು. ಕೃಷ್ಣಾನಂದ ಕಾಮತರ 'ಕೀಟ ಜಗತ್ತು' ಗ್ರಂಥದಲ್ಲಿ ಕೀಟಗಳ ಕುರಿತಾಗಿ ಪ್ರತಿಯೊಬ್ಬರೂ ತಿಳಿದುಕೊಳ್ಳಬಹುದಾದ ಅನೇಕ ವಿಚಾರಗಳನ್ನು ಸರಳ ಭಾಷೆಯಲ್ಲಿ ನಿರೂಪಿಸಲಾಗಿದೆ. ಅದನ್ನು ಸಂಕ್ಷಿಪ್ತವಾಗಿ ಹೇಳುವುದಾದರೆ..

ಸಾಮಾನ್ಯವಾಗಿ ಕ್ರಿಮಿಕೀಟಗಳನ್ನು ಹುಳಗಳು, ಹುಪ್ಪಡಿ, ಜೀವಿಗಳೆಂದು ಗುರುತಿಸಲಾಗುತ್ತದೆ. ಕಾಟ ಕೊಡುವ ಕೀಟಗಳೊಂದಿಗೆ ಸೌಂದರ್ಯ ಭರಿತವಾಗಿ ಕಣ್ಣು ತುಂಬುವ ಕೀಟಗಳೂ ಇರುತ್ತವೆ. ಚಿಟ್ಟೆ, ಪತಂಗ, ತಗಣಿ, ಇರುವೆ, ನೊಣ, ಗುಂಗಾಡು, ಜೇಡ, ಧಾನ್ಯಕೀಟ, ಬೇರಿನ ಕೀಟ ಇತ್ಯಾದಿ ಕೀಟಜಾತಿಗೆ ಸೇರುವ ಜೀವಿಗಳು. ಚಿಟ್ಟೆ ಅಥವಾ ಪಾತರಗಿತ್ತಿಗಳಲ್ಲಿ ಇರುವ ಜಾತಿ, ವೈವಿಧ್ಯಗಳು ನೂರಾರು. ಕೀಟಗಳ ಸಂತತಿ ನಿರ್ಮಾಣ ಕಾರ್ಯ ಅಗಾಧವಾದುದು. ತಾಯಿಕೀಟ ಇಡುವ ಎಲ್ಲಾ ಮೊಟ್ಟೆಗಳಿಂದ ಮರಿ ಹೊರಬಂದು ಬದುಕುವುದಿದ್ದರೆ ಒಂದೇ ವರ್ಷದಲ್ಲಿ ಜಗತ್ತಿನ ಭೂಪ್ರದೇಶವೆಲ್ಲ

ಈ ಕೀಟಗಳಿಂದ ತುಂಬಿ ಹೋಗುವುದಂತೆ! ಆದರೆ ಬಿಸಿಲು, ಗಾಳಿ, ವೈರಿಗಳಿಂದಾಗಿ ಕೀಟಗಳ ಸಂಖ್ಯೆ ಸದಾ ನಿಯಂತ್ರಣದಲ್ಲಿರುತ್ತದೆ.

ಪ್ರಾಣಿಜಗತ್ತಿನಲ್ಲಿ ಮಾನವನನ್ನು ಹಿಂದೆಹಾಕುವ ಸುಸಂಸ್ಕೃತ, ಸಂಘಟಿತ ಜೀವನವನ್ನು ಇರುವೆಗಳು ನಡೆಸುತ್ತವೆ ಎಂಬ ಕುತೂಹಲಕಾರಿ ಸಂಗತಿಯನ್ನು ಕೃಷ್ಣಾನಂದ ಕಾಮತರು ತಿಳಿಸುತ್ತಾರೆ. ಇರುವೆಗಳಲ್ಲಿ ತಮ್ಮ ಸಮಾಜಕ್ಕೆ ಮಾಡಬೇಕಾದ ಕೆಲಸವನ್ನು ಅವಲಂಬಿಸಿ ಕೆಲಸಗಾರ ಇರುವೆ, ಸೈನಿಕ ಇರುವೆ, ತಾಯಿ ಇರುವೆ ಎಂಬ ಭೇದವಿರುತ್ತದೆ. ಅವುಗಳ ದೇಹರಚನೆಯಲ್ಲಿಯೂ ವ್ಯತ್ಯಾಸ ಇರುತ್ತದೆ. ಇರುವೆಗೃಹಗಳಲ್ಲಿ ರಾಣಿ ಇರುವೆಗೆ, ಕಾಳುಕಡ್ಡಿ ಸಂಗ್ರಹಕ್ಕೆ, ಸಾಕಿದ 'ದನಕರು'ಗಳಿಗೆ ಹಾಗೂ ಕಾರ್ಮಿಕರಿಗೆ ಮೀಸಲಾದ ಕೊಠಡಿಗಳಿರುತ್ತವೆ. ಮಧುವಿನಂತಹ ಸಿಹಿ ಪದಾರ್ಥವನ್ನು ವಿಸರ್ಜಿಸುವ ಕೆಲವು ಷಟ್‌ಪಾದಿಗಳನ್ನು ಇರುವೆಗಳು ಹಾಲು ಕೊಡುವ ದನದ ರೂಪದಲ್ಲಿ ಸಾಕುತ್ತವೆಯಂತೆ! ಅವುಗಳ ಆಹಾರಕ್ಕಾಗಿ ಹೊಲವನ್ನು ಉತ್ತು ಸಣ್ಣಸಸಿಗಳನ್ನು ಬೆಳೆಸುವ ಚಾಣಾಕ್ಷತನವನ್ನೂ ಅವು ತೋರಿಸುತ್ತವೆಯಂತೆ! ಒಮ್ಮೆ ಇರುವೆ ಕಟ್ಟಿದ ಮಣ್ಣಿನ ದಿಬ್ಬದಂತಹ ಕೋಟೆಯನ್ನು ವೀಕ್ಷಿಸುವ ಅವಕಾಶ ಕಾಮತರಿಗೆ ದೊರೆತಿತ್ತು. ನಾಲ್ಕಾರು ಗುಹಾಲಯದಂತಿದ್ದ ಆ ಕೋಟೆಯಲ್ಲಿ ಪ್ರತಿಯೊಂದು ವಾಸಸ್ಥಾನಕ್ಕೆ ಸುರಂಗಮಾರ್ಗಗಳಿದ್ದು, ಇಂತಹ ಬೃಹತ್ ರಚನೆಗೆ ಯಾವುದೇ ರೀತಿಯ ನಕಾಶೆ, ಪೂರ್ವ ಯೋಜನೆ, ತಜ್ಞರ ಸಲಹೆ, ಹಾರೆ, ಪಿಕಾಸು, ಗುದ್ದಲಿ, ಸಿಮೆಂಟು, ಉಕ್ಕುಗಳ ಸಹಾಯ ಬೇಕಿಲ್ಲವೆಂದು ಅರಿತಾಗ ಈ ಮಣ್ಣಿನ ಮಕ್ಕಳ ಬಗ್ಗೆ ಗೌರವ ಹೆಚ್ಚಿ ಕುತೂಹಲ ಕೆರಳಿತು ಎನ್ನುತ್ತಾರೆ ಈ ಕೀಟವಿಜ್ಞಾನಿ.

ಸದಾಕಾಲ ಆಹಾರದ ಜಾಡನ್ನು ಹುಡುಕಿ ಹೋಗುವ ಇರುವೆಗಳು ತಾನು ಕಂಡು ಹಿಡಿದ ಆಹಾರದ ವಾಸನೆಯನ್ನು ಕ್ಷಣಮಾತ್ರದಲ್ಲಿ ತನ್ನ ಸಂಗಾತಿಗಳಿಗೆ ತಿಳಿಸುತ್ತವೆ. ಹೀಗಾಗಿ ಸಾವಿರಾರು ಇರುವೆಗಳು ಆಹಾರ ಇರುವೆಡೆ ಧಾವಿಸಿ ಬರುವುದು ಸಾಮಾನ್ಯ. ನೀರಿಗಿಳಿದು ಸತ್ತ ಇರುವೆಗಳನ್ನು ತೆಪ್ಪದ ಹಾಗೆ ಬಳಸಿ ದಾಟುವ ಬುದ್ಧಿವಂತಿಕೆಯೂ ಇರುವೆಗಳಲ್ಲಿದೆ.

ಇರುವೆಗಳು ಕಾದಾಟದಲ್ಲಿ ತೊಡಗಿಕೊಳ್ಳುವುದುಂಟು. 'ಹಿರಿಯರು ಇರುವೆಯಂತೆ ದುಡಿಯಲು ಉಪದೇಶಿಸಿದರೂ ಇರುವೆಯಂತಹ ಉಪದ್ರವ ಪ್ರಾಣಿಯಾಗಿ ಮಾತ್ರ ಬಾಳಬಾರದು' ಎಂದು ಕಾಮತರು ಕಿವಿ ಮಾತು ಹೇಳುತ್ತಾರೆ.

ಮೊಟ್ಟೆಯಿಂದ ಹುಳು ಹೊರಗೆ ಬಂದು ಅದು ಕೋಶ ಕಟ್ಟಿ ಮಲಗಿ ಮುಂದೆ ವರ್ಣರಂಜಿತ ಪಾತರಗಿತ್ತಿಯಾಗಿ ಹೂವನ್ನು ಅರಸಿ ಹಾರಿ ಹೋಗುವ ಪ್ರಕೃತಿ ವಿಸ್ಮಯವನ್ನು, ಮಾನವನಿಗೆ ಬೆಲೆಬಾಳುವ ರೇಶ್ಮೆಯನ್ನು ಒದಗಿಸುವ ರೇಶ್ಮೆ ಪತಂಗದ ಕಾರ್ಯವೈಖರಿಯನ್ನು ಇಲ್ಲಿ ಸುಂದರವಾಗಿ ಕಟ್ಟಿಕೊಡಲಾಗಿದೆ. ಪಶುಪಕ್ಷಿಗಳ ರಕ್ತ ಹೀರಿ ಪರಾವಲಂಬಿ ಜೀವನ ನಡೆಸುವ ತಗಣಿಗಳ ಕಡಿತಕ್ಕೆ ಹೆದರದ ಮನುಷ್ಯರೇ ಇಲ್ಲವೆನ್ನಬಹುದು. ತಗಣಿಗಳದು ಸಹಜೀವನ. ಅವು ಗುಂಪು ಗುಂಪಾಗಿ ವಾಸಿಸುತ್ತವೆ. ವರ್ಷದವರೆಗೆ ರಕ್ತಕ್ಕಾಗಿ ಕಾದು ಹಸಿದೇ ಇರಬಲ್ಲ ಶಕ್ತಿ ತಗಣಿಗೆ ಇರುವುದಂತೆ! ಮನೆಯಲ್ಲಿ ತಗಣಿ ಬಾರದ ಹಾಗೆ ಸುರಕ್ಷಿತಕ್ರಮಗಳನ್ನು ಅಳವಡಿಸಿಕೊಂಡರೂ, ಸಾರ್ವಜನಿಕ ಸ್ಥಳದಲ್ಲಿ ಅವುಗಳಿಂದ ಕಚ್ಚಿಸಿಕೊಳ್ಳುವ ತೊಂದರೆ ಇದ್ದೇ ಇರುತ್ತದೆ.

ಉದ್ದು, ಹೆಸರು, ತೊಗರಿ ಮುಂತಾದ ಧಾನ್ಯಗಳನ್ನು ನಾಶಪಡಿಸುವ ಧಾನ್ಯಕೀಟಗಳು ರೈತರ ಮತ್ತು ಗೃಹಿಣಿಯರ ಶತ್ರುಗಳು. ಧಾನ್ಯಗಳನ್ನು ಶೇಖರಿಸಿ ಇಡುವ ಗೋದಾಮುಗಳಲ್ಲಿ, ಅಡುಗೆಡಬ್ಬಗಳಲ್ಲಿ ಅವು ಸದ್ದಿಲ್ಲದೆ ತಮ್ಮ ಭಕ್ಷಣೆಯ ಕಾರ್ಯವನ್ನು ಪ್ರಾರಂಭಿಸಿ ಧಾನ್ಯದ ಕಾಳುಗಳನ್ನೆಲ್ಲಾ ತಿಂದು ಸಿಪ್ಪೆ ಬಿಸಾಡಿ ಬಿಡುತ್ತವೆ. ಕಾಳುಗಳ ಧ್ವಂಸ ಕಾರ್ಯದಲ್ಲಿ ಪುಟ್ಟಕೀಟಗಳ ಚಾತುರ್ಯ ಇಲಿಗಳನ್ನೂ ಮೀರಿಸಿದ್ದು ಎನ್ನುತ್ತಾರೆ ಕಾಮತರು! ಸಸ್ಯಗಳ ಬೀಜ, ಕಾಳುಗಳನ್ನು ಸ್ವಾಹಾ ಮಾಡುವ ಕೀಟಗಳೊಂದಿಗೆ ಹೂ, ಬೇರುಗಳಿಗೂ ಆಕ್ರಮಣ ಮಾಡುವ ಎಫಿಡೆ, ಲಿಲಿಪತಂಗ, ಬೇರಿನಕೀಟ ಮೊದಲಾದುವುಗಳು ಸಸ್ಯ ಜಗತ್ತಿಗೆ ವಿನಾಶಕಾರಿಯಾಗಿ ಪರಿಣಮಿಸುವ ಕಂಟಕಗಳು. ಕೀಟಗಳ ಆಕ್ರಮಣಶೀಲತೆ, ಅವು ಉತ್ಪಾದಿಸುವ ರಾಸಾಯನಿಕಗಳು, ಸಂತತಿಯನ್ನು ಬೆಳೆಸುವ ಅವುಗಳ ಕ್ರಮಗಳು, ಸ್ವರಕ್ಷಣೆಗೆ ಅವು ಅಳವಡಿಸಿಕೊಳ್ಳುವ ಚಿತ್ರವಿಚಿತ್ರ ಮುಂಜಾಗ್ರತಾ ಕ್ರಮಗಳು ಈ ಕೀಟವರ್ಗ ಸಾವಿರಾರು

ವರ್ಷಗಳಿಂದ ಮುಂದುವರಿದು ಬರಲು ಕಾರಣವಾಗಿವೆ. ಬುದ್ಧಿಜೀವಿ ಎನಿಸಿರುವ ಮನುಷ್ಯರಿಗೂ ಸವಾಲು ಹಾಕಬಲ್ಲ, ಅವನಿಗೆ ಸದಾ ಉಪದ್ರವಕಾರಿ ಎನಿಸಿದ ಈ ಕೀಟಗಳ ಹುಟ್ಟಿನಿಂದ ಸಾವಿನವರೆಗಿನ ಜೀವನವೃತ್ತಾಂತವನ್ನು ಕಾಮತರು ಬಹು ಸೊಗಸಾಗಿ ವಿವರಿಸಿದ್ದಾರೆ.

**ಕಾಗೆಗಳ ಕಾಯಕ ಬಲ್ಲಿರೇನು?**

ಮುಂಜಾನೆ ಬೆಳಕು ಮೂಡುವುದರೊಳಗೆ ಅಂಗಳದ ಮರದ ಮೇಲೆ ಕುಳಿತು 'ಕಾ..ಕಾ..' ರಾಗ ಹಾಡುತ್ತಾ ಮನೆಯವರನ್ನು ಎಚ್ಚರಿಸಿ ಕರೆಯುವ ಕಾಗೆಯ ಪರಿಚಯ ಯಾರಿಗಿಲ್ಲ? ಕೆಲಸದಾಕೆ ಮುಸುರೆ ಪಾತ್ರೆಗಳನ್ನು ತಂದು ತೆಂಗಿನಮರದ ಬುಡದಲ್ಲಿ ಹಾಕಿದ ಕೂಡಲೇ, ತನ್ನ ಬಳಗವನ್ನು ಕರೆಯುತ್ತಾ ಅಲ್ಲಿ ಚೆಲ್ಲಿದ ಅನ್ನದ ಅಗಳು, ತರಕಾರಿ ಹೋಳುಗಳನ್ನು ಕುಕ್ಕಿ ಕುಕ್ಕಿ ತಿನ್ನುವ ಕಾಗೆಯಿಂದ ನಾವು ನೀತಿಪಾಠ ಕಲಿಯುವುದು ಇದೆ ಎಂದು ಹಿರಿಯರು ಹಿಂದೆ ಹೇಳಿದ್ದುಂಟು. ದಿನನಿತ್ಯ ಕಾಗೆಗಳನ್ನು ನೋಡಿದವರಿಗೂ ಅದರ ಚಲನವಲನ, ಉದರನಿರ್ವಹಣೆ, ಸಂತಾನೋತ್ಪತ್ತಿ ಇತ್ಯಾದಿ ಕುರಿತು ಹೆಚ್ಚಿನ ತಿಳಿವಳಿಕೆ ಇರುವುದಿಲ್ಲ. ಆದರೆ ಅಂಗಳದಲ್ಲಿ ಕುಪ್ಪಳಿಸುತ್ತಾ ಹಾರುವ ಕಾಗೆಗಳನ್ನು ಹಿಂಬಾಲಿಸಿ ಹೋಗುವ ಪುಟ್ಟ ಪುಟ್ಟ ಮಕ್ಕಳಿಗೆ ಕಾಗೆಗಳ ಕುರಿತು ಸಹಜ ಆಸಕ್ತಿ ಇರುತ್ತದೆ. 'ಅದು ಎಲ್ಲಿಂದ ಬಂದಿದೆ? ಎಲ್ಲಿಗೆ ಹೋಗುತ್ತದೆ?' ಹೀಗೆ ಕಾಗೆ ಕುರಿತು ಪ್ರಶ್ನೆ ಕೇಳುವ ಮಕ್ಕಳ ಕುತೂಹಲವನ್ನು, ಹಿರಿಯರ ಕಾಗೆ ಕುರಿತಾದ ಅವಜ್ಞೆಯನ್ನು ತಣಿಸುವ ಕಾಗೆಯ ಕತೆಯನ್ನು ಕೃಷ್ಣಾನಂದ ಕಾಮತರು 'ಕಾಗೆಯ ಕಾಯಕ' ಗ್ರಂಥದಲ್ಲಿ ವಿವರಿಸಿದ್ದಾರೆ. ಕಾಗೆಗಳ ಚಮತ್ಕಾರಿಕ ಜೀವನದ ಕುರಿತು ತಿಳಿಹೇಳುವ ಆಧಾರ ಗ್ರಂಥಗಳು ಲಭ್ಯವಿಲ್ಲದಿದ್ದಾಗ, ಕಾಗೆಗಳ ಜನ್ಮಜಾತಕವನ್ನು ಹುಡುಕಿಕೊಂಡು ಅವುಗಳನ್ನು ಹಿಂಬಾಲಿಸಿ ಹೋಗಿ ಕಾಮತರು ಕಲೆ ಹಾಕಿರುವ ಮಾಹಿತಿಯನ್ನು ಓದುತ್ತಿದ್ದರೆ ಕಾಗೆಗಳ ಕುರಿತು ನಮ್ಮಲ್ಲಿ ಗೌರವದ ಭಾವನೆ ಹುಟ್ಟುತ್ತದೆ.

ಕಾಗೆ ಸರ್ವಭಕ್ಷಕ ಪಕ್ಷಿ. ಅದಕ್ಕೆ ನಿರ್ದಿಷ್ಟ ಆಹಾರದ ಮಡಿವಂತಿಕೆ ಇಲ್ಲ. ಅದರ ಬೆಳಗಿನ ನಾಶ್ತಾ ವಿವರವನ್ನು ಕಾಮತರು ತಿಳಿಸುವ ರೀತಿ ಹೀಗಿದೆ:

ಕಾಗೆಯ ದಿನಚರಿ ನಸುಗತ್ತಲಿನಲ್ಲಿ ರಸ್ತೆದೀಪಗಳಿಗೆ ರಾತ್ರಿ ಮುತ್ತಿಕೊಂಡಿರುವ ಕೀಟಗಳನ್ನು ತಿನ್ನುವುದರ ಮೂಲಕ ಪ್ರಾರಂಭವಾಗುತ್ತದೆ. ಆಮೇಲೆ ಅದು ಇರುವೆ, ಗೆದ್ದಲರಾಣಿ, ಇರುಳಚಿಟ್ಟೆಗಳನ್ನೂ ಸ್ವಾಹಾ ಮಾಡುವುದು. ಮನೆ, ಮನೆ ಭೇಟಿಯಲ್ಲಿ ತಂಗಳನ್ನ, ಭಕ್ರಿ, ಟೋಸ್ಟ್, ಪೂರಿ ಏನೇ ಸಿಕ್ಕಿದರೂ ಅದಕ್ಕೆ ಬೇಡವಾಗುವುದಿಲ್ಲ. ದಾರಿಯಲ್ಲಿ ಬಿದ್ದ ಇಲಿ, ಮಾರ್ಕೆಟ್ಟಿನಲ್ಲಿ ಚೆಲ್ಲಿರುವ ಮೀನಿನ ಅವಶೇಷಗಳೂ ಅದಕ್ಕೆ ಇಷ್ಟವೇ. ನಾಶ್ತಾ ಮುಗಿಸಿದ ಬಳಿಕ ಮರದ ತೊಗಟೆಗೆ ಕೊಕ್ಕನ್ನು ತಿಕ್ಕಿ ಶುಚಿ ಮಾಡುವ ಕಾಗೆ, ಬಾಯಾರಿಕೆ ಆಯಿತೆಂದು ನೀರಿಳಿವ ನಲ್ಲಿಯ ಮೇಲೆ ಮಾಟವಾಗಿ ಕುಳಿತು ಗೋಣು ತಿರುವಿ ಚುಂಚನ್ನು ಅಗಲಿಸಿ ನೀರು ಕುಡಿಯುತ್ತದೆ. ಆಮೇಲೆ ಮಡುವಿನಲ್ಲಿ ಇಳಿದು ಸ್ನಾನ ಮಾಡುವುದು. ಕಾಗೆ ಸ್ನಾನ ಮಾಡುವುದನ್ನು ನೋಡಿದರೆ ಕಂಟಕ ವೆಂದುಕೊಳ್ಳುವ ಮನುಷ್ಯರು, ಅದು ಹಸಿವಾದಾಗ ಮರದ ಮೇಲೆ ಕುಳಿತು ಕಾ..ಕಾ.. ರಾಗವೆಳೆದರೆ ಮನೆಗೆ ನೆಂಟರು ಬರುವ ಸೂಚನೆ ಅದು ಎಂದು ಕೊಳ್ಳುತ್ತಾರೆ. ಕಾಗೆಯ ಕಾಯಕ ತಿಳಿಯದವರ ಮೂಢನಂಬಿಕೆ ಇದು.

ಕಾಗೆಗಳು ಸರ್ವವ್ಯಾಪಿ, ಕೆಲ ಮಹಾಸಾಗರದಲ್ಲಿನ ನಡುಗುಡ್ಡೆಗಳನ್ನು ಬಿಟ್ಟರೆ, ಉಳಿದೆಲ್ಲ ಕಡೆ ವಸಾಹತು ಮಾಡಿವೆ. ಊರಿನ ಕಾಗೆ, ಕಾಡಿನ ಕಾಗೆ ಎಂಬ ಪ್ರಭೇದಗಳಿವೆ. ಕಾಗೆಗಳ ವಾಸಸ್ಥಾನ ಮರದ ಮೇಲೆ. ಕಾಗೆಗಳು ನ್ಯಾಯವಿಚಾರಣೆ ನಡೆಸುತ್ತವೆಯಂತೆ! ತಮ್ಮ ಬಳಗದ ತಪ್ಪಿತಸ್ಥರನ್ನು ಬಹಿಷ್ಕರಿಸಿ ಶಿಕ್ಷೆ ವಿಧಿಸುತ್ತವೆಯಂತೆ! ಮನುಷ್ಯರ ಹಾಗೆ ಕೆಲವು ಕಾಗೆಗಳು ನಿದ್ದೆಯಲ್ಲಿಯೂ ಮಾತನಾಡಿಕೊಳ್ಳುತ್ತವೆಯಂತೆ! ಸೋಮಾರಿ ಕೋಗಿಲೆ ತನ್ನ ಗೂಡಿನಲ್ಲಿ ಮೊಟ್ಟೆ ಇಟ್ಟಿರುವುದನ್ನು ತಿಳಿಯದ ಮುಗ್ಧ ಕಾಗೆ ತನ್ನ ಮೊಟ್ಟೆಗಳ ಜೊತೆಗೆ ಕೋಗಿಲೆಯ ಮೊಟ್ಟೆಗೂ ಕಾವು ಕೊಟ್ಟು ಮರಿ ಮಾಡುವುದು. ಕೋಗಿಲೆ ಮರಿ ಬೆಳೆದ ಮೇಲೆ ಕಾಗೆಗೆ ತಾನು ಮೋಸ ಹೋದ ಸಂಗತಿ ತಿಳಿಯುವುದು! ಒಣಗಲು ಹಾಕಿದ ಹಪ್ಪಳ, ಸಂಡಿಗೆಗಳನ್ನು ಕದ್ದು ತಿನ್ನುವುದು, ಮಕ್ಕಳ ಕೈಯಲ್ಲಿರುವ ತಿಂಡಿ ಪೊಟ್ಟಣವನ್ನು ಕಸಿಯುವುದು, ಬೇರೆ ಪ್ರಾಣಿ, ಪಕ್ಷಿಗಳಿಗೆ ಹಾಕಿದ ಆಹಾರದಲ್ಲಿ ಪಾಲು ಕಸಿಯುವುದು ಇವೆಲ್ಲ ಕಾಗೆಗಳ ಕುತಂತ್ರಗಳು. ಮುಷ್ಠಿ ಗಾತ್ರದ ದೇಹವನ್ನುಳ್ಳ

ಕಾಗೆ ತಾನು ಗೂಡು ಕಟ್ಟಿರುವ ಮರದ ಮೇಲೆ ಹಾವು, ಮಂಗ, ಮನುಷ್ಯ ಏರಿ ಬಂದರೂ ಸಹಿಸದೆ ಅವುಗಳನ್ನು ಕುಕ್ಕಿ ಕುಕ್ಕಿ ಸತಾಯಿಸದೆ ಬಿಡುವುದಿಲ್ಲ! ಹೀಗಾಗಿ ಈ ಕಾಗೆಯ ಕರಕರಿಯೇ ಬೇಡವೆಂದು ದೂರ ಉಳಿಯುವವರೇ ಜಾಸ್ತಿ. ಊರ ಕೊಳಚೆಯನ್ನು ತನ್ನದೇ ರೀತಿಯಲ್ಲಿ ಸ್ವಚ್ಛಗೊಳಿಸುವ, ಸತ್ತ ಪ್ರಾಣಿಗಳನ್ನು ತಿಂದು ಹವೆಯ ಅನಾರೋಗ್ಯತೆಯಿಂದ ರಕ್ಷಿಸುವ ಉಪಕಾರಿ ಕಾಗೆಗಳನ್ನು 'ನೈಸರ್ಗಿಕ ಝಾಡಮಾಲಿ'ಗಳೆಂದು ಕರೆಯುವ ಕಾಮತರು ಕೆಲವು ಕಾಗೆಗಳು ಮನೆಗೆ ಹಾಕಿದ ಗಾಜುಗಳನ್ನು ಒಡೆದು ಮನೆ ಪ್ರವೇಶಿಸಿ ತಿಂಡಿ–ತಿನಿಸು ಮೆದ್ದು ಮನೆಯಲ್ಲಿದ್ದ ಮಕ್ಕಳು ಮುದುಕರ ಮೇಲೆ ಹಲ್ಲೆ ನಡೆಸಿ 'ಭಯೋತ್ಪಾದಕ'ಗಳಾಗಿ ವರ್ತಿಸುವುದೂ ಉಂಟು ಎಂದು ಹೇಳುತ್ತಾರೆ. ಆದರೆ ಮನುಷ್ಯರು ಕಾಗೆಗಳಿಂದ ರಕ್ಷಿಸಿಕೊಳ್ಳುವ ಕ್ರಮವನ್ನು ಅಳವಡಿಸಿಕೊಳ್ಳಬೇಕಲ್ಲದೆ ಅವುಗಳನ್ನು ಕೊಲ್ಲುವ ತಂತ್ರಗಳನ್ನು ರೂಪಿಸಬಾರದೆಂದು ಜೀವವಿಜ್ಞಾನಿಯಾಗಿ ಕೃಷ್ಣಾನಂದರು ತಿಳಿಸುತ್ತಾರೆ. 'ಕಾಗೆಗಳು ಉಪಯುಕ್ತ ಸಹಜೀವಿಗಳು; ನಮ್ಮಷ್ಟೇ ಅವಕ್ಕೂ ಜಗತ್ತಿನಲ್ಲಿ ಬಾಳಿ ಬದುಕುವ ಅಧಿಕಾರ ಇದೆ ಎಂದು ಅರಿತು, ಅವಕ್ಕೆ ಜೀವಿಸಲು ಅನುವು ಮಾಡಿಕೊಡುವುದು ಕ್ಷೇಮಕಾರಿ' ಎನ್ನುತ್ತಾರೆ ಅವರು.

## ಹಾವು ಕಂಡರೆ ಬೆಚ್ಚಿ ಬೀಳದವರು ಯಾರು?

ನೆಲದ ಮೇಲೆ ಸರಸರನೆ ಹರಿದು ಬರುವ ಕಪ್ಪು, ಕಂದು, ಹಳದಿ ಬಣ್ಣದ ಹಾವುಗಳನ್ನು ಕಂಡರೆ ಹೆದರದವರು, ಬೆಚ್ಚಿ ಬೀಳದವರು ಯಾರು? ತರಗೆಲೆಗಳ ಮರೆಯಲ್ಲಿ, ಪೊದೆಯಲ್ಲಿ, ಮನೆಯಂಗಳದಲ್ಲಿ, ಬಚ್ಚಲುಮನೆಯಲ್ಲಿ ಪೇರಿಸಿಟ್ಟ ಕಟ್ಟಿಗೆ ರಾಶಿಯ ನಡುವೆ ಧಿಗ್ಗನೆ ಕಾಣಿಸಿ, ತಕ್ಷಣ ಮಾಯವಾಗುವ ಹಾವು ಕಣ್ಣಿಗೆ ಬಿದ್ದರೆ ಎಂತಹ ಧೈರ್ಯಶಾಲಿಗಳ ಎದೆಯೂ ಝಲ್ಲೆನಿಸದಿರದು. ಮನುಷ್ಯ ಹಾವಿಗೆ ಹೆದರುವುದು ಅದು ಕಚ್ಚಿದರೆ ಸಾವು ಸಂಭವಿಸಬಹುದು ಎಂಬ ಕಾರಣಕ್ಕಾಗಿ. ಹಾವಿನ ಕುರಿತಾದ ಭಯವನ್ನೇ ಹಿನ್ನೆಲೆಯಾಗಿಸಿ ಅನೇಕ ಪೌರಾಣಿಕ, ಜಾನಪದ ಕಥೆಗಳು ಚಾಲ್ತಿಯಲ್ಲಿವೆ. ಈ ಕಥೆಗಳಲ್ಲಿ ಹಾವಿನ ರೂಪಾಂತರಗಳು,

ದ್ವೇಷಸಾಧನೆಗಳು, ಐದು, ಹತ್ತು, ಸಹಸ್ರ ಹೆಡೆಗಳನ್ನು ಹೊಂದಿರುವ ಭಯಾನಕ ರೂಪಗಳು ಕಾಣಿಸಿಕೊಂಡು ಮನುಷ್ಯನಲ್ಲಿ ಹಾವಿನ ಕುರಿತು ಮೂಢನಂಬಿಕೆ, ಭಯ ಹುಟ್ಟುವಂತೆ ಮಾಡಿವೆ. ಆದರೆ ಹಾವು ಉರಗಜಾತಿಗೆ ಸೇರಿದ ಪ್ರಾಣಿ, ಅದು ಬೇರೆಲ್ಲಾ ಪ್ರಾಣಿಗಳಂತೆ ಹೊಟ್ಟೆ ಹೊರೆಯುವುದಕ್ಕಾಗಿ ಆಹಾರ ಹುಡುಕಿ ಅಲೆದಾಡಿಕೊಂಡಿರುತ್ತದೆ. ತನಗೆ ತೊಂದರೆ ಉಂಟುಮಾಡುವವರಿಗೆ ಮಾತ್ರ ಅದು ಕಚ್ಚುತ್ತದೆ. ಎಲ್ಲಾ ಹಾವುಗಳು ವಿಷಕಾರಿಯಲ್ಲ ಎಂದು ಪ್ರತಿಯೊಬ್ಬರೂ ತಿಳಿಯಬೇಕಾದುದು ಅತ್ಯವಶ್ಯವೆಂದು ಕೃಷ್ಣಾನಂದ ಕಾಮತರು ಹಾವು ಜಾತಿಯನ್ನು ಪರಿಚಯಿಸುವುದಕ್ಕಾಗಿಯೇ 'ಸರ್ಪ ಸಂಕುಲ'ವೆಂಬ ಕಿರುಗ್ರಂಥವನ್ನು ಬರೆದು ಪ್ರಕಟಿಸಿದ್ದಾರೆ. ಇದರಲ್ಲಿ ನಮ್ಮ ದೇಶದ, ವಿದೇಶದ ಹಾವುಗಳ ಅಪರೂಪದ ವಿವರಗಳು ಇವೆ. ಕೇರೆಹಾವು, ಸರ್ಪ, ಹೆಬ್ಬಾವುಗಳನ್ನು ಕಂಡಲ್ಲಿ ಕಲ್ಲು ಹೊಡೆದು ಕೊಲ್ಲುವ ಪ್ರವೃತ್ತಿ ನಿಲ್ಲಬೇಕು, ಉಳಿದ ಪ್ರಾಣಿಗಳಂತೆ ಹಾವುಗಳನ್ನೂ ಸಹಜೀವಿಯಾಗಿ ಪರಿಗಣಿಸುವ ಮನೋಭಾವ ಪ್ರತಿಯೊಬ್ಬರಲ್ಲಿಯೂ ಬೆಳೆಯಬೇಕೆನ್ನುವುದು ಲೇಖಕರ ಆಶಯ.

ಕೃಷ್ಣಾನಂದರು ಜೀವಜಗತ್ತಿನ ಕುರಿತು ನೀಡುವ ವೈಜ್ಞಾನಿಕ ಮಾಹಿತಿಗಳು ಶುಷ್ಕ ವಿವರಣೆಗಳಾಗಿರದೆ ಪ್ರಾಣಿ, ಪಕ್ಷಿಗಳ ಕುರಿತು ಒಲವು ಮೂಡಿಸುವ, ಆರ್ದ್ರತೆ ಉಂಟುಮಾಡುವ ಬರಹಗಳಾಗಿವೆ. ಅವರು ವಿವರಿಸುವ ಕೋಗಿಲೆಯ ವಸಂತ ಮಾಸದ ಕರೆ, ಮೈನಾ ಹಕ್ಕಿಯ ಸರಸ ಸಂಭಾಷಣೆ, ಇಣಚಿಗಳ ಮುಟ್ಟಾಟ, ಕೊಕಾಬುರಾ ಹಕ್ಕಿಯ ಕಿಲಿಕಿಲಿನಗು, ಪೆಲಿಕನ್‌ನ ಅಳು, ಮಂಗನ ಹಲ್ಲುಕಿರಿತ, ಓತಿಕ್ಯಾತದ ಧ್ಯಾನ ಮನಸ್ಸಿಗೆ ಮುದ ನೀಡುತ್ತವೆ. ಆಫ್ರಿಕಾದ 'ಆಚಾಯಿಲ್ ಮಂಗಾಬೆ' ಎನ್ನುವ ಕೋತಿ ದಿನವಿಡೀ ಹಾಸ್ಯಗಾರನಂತೆ ತಾನೂ ನಕ್ಕು ಇತರರನ್ನೂ ನಗಿಸುತ್ತಾ ಇರುವುದು, ಕಾಡಾನೆಯ ಮರಿ ಅಪಘಾತದಲ್ಲಿ ಸಾವನ್ನಪ್ಪಿದರೆ, ಇಡೀ ತಂಡವೇ ಶೋಕದಲ್ಲಿ ಮುಳುಗುವುದು, ಆಕಳು – ಎಮ್ಮೆಗಳು, ಕರು ಮೃತಪಟ್ಟಾಗ ನೀರು ಆಹಾರ ತೊರೆಯುವುದು – ಇಂತಹ ವಿವರಗಳನ್ನು ನೀಡುವುದರ

ಮೂಲಕ ಪ್ರಾಣಿಗಳಲ್ಲಿಯೂ ಸಾಮಾಜಿಕ, ಭಾವನಾತ್ಮಕ ಸಂಬಂಧ ಇರುವುದನ್ನು ಅವರು ಸ್ಪಷ್ಟಪಡಿಸುತ್ತಾರೆ.

ಪ್ರಾಣಿಪರಿಸರದಲ್ಲಿ ಜೀವವಿಕಾಸವನ್ನು ಪ್ರತಿನಿಧಿಸುವ ಏಕಾಣು ಜೀವಿಗಳಿಂದ ಹಿಡಿದು ಮನುಷ್ಯನವರೆಗೆ ದೇಹರಚನೆ, ಅಂಗಾಂಗ ರೂಪುಗೊಳ್ಳುವಿಕೆ ಹಾಗೂ ಸಂತತಿ ಪಾಲನೆಯಲ್ಲಿ ಉಂಟಾಗಿರುವ ಸ್ಥಿತ್ಯಂತರಗಳನ್ನು ಒಂದೊಂದಾಗಿ ಕಾಮತರು ವಿವರಿಸುವುದರಿಂದ ಪ್ರಾಣಿಜಗತ್ತಿನ ಸರಳ ಪರಿಚಯವಾಗುವುದು. ದಿನನಿತ್ಯದ ಆಹಾರ ಸಂಪಾದನೆಗೆ, ವಾಸಸ್ಥಾನದ ಉಳಿಯುವಿಕೆಗೆ, ಸಂತತಿ ಮುಂದುವರಿಕೆಗೆ ಪಶುಪಕ್ಷಿಗಳು ನಡೆಸುವ ಹೋರಾಟ ಮನುಷ್ಯ ತನ್ನ ಅಸ್ತಿತ್ವದ ಉಳಿಯುವಿಕೆಗಾಗಿ ನಡೆಸುವ ಹೋರಾಟದಷ್ಟೇ ಮುಖ್ಯವಾದುದು ಎಂದು ಮನಗಾಣಿಸುವ ಪ್ರಯತ್ನವನ್ನು ಕಾಮತರು ಮಾಡಿದ್ದಾರೆ. ಪ್ರಾಕೃತಿಕ ಅನಾಹುತಗಳು, ಅಭಿವೃದ್ಧಿಯ ಹೆಸರಿನಲ್ಲಿ ಮನುಷ್ಯ ನಡೆಸುವ ಬೇಜವಾಬ್ದಾರಿ ಕೃತ್ಯಗಳು ಜೀವರಾಶಿಯ ವಿನಾಶಕ್ಕೆ, ಅವನತಿಗೆ ಕಾರಣವಾಗಿವೆ. ಇತ್ತೀಚಿಗಿನ ವರ್ಷಗಳಲ್ಲಿ ಹುಲಿ ಸಂತತಿ, ಚೀತಾ, ಹದ್ದುಗಳು, ಮಂಗಟ್ಟೆ, ಜಿಂಕೆಯ ಪ್ರಭೇದ ಕಣ್ಮರೆಯಾಗುತ್ತಿರುವುದರ ಕುರಿತು ಜೀವ ವಿಜ್ಞಾನಿ ಕಾಮತರಿಗೆ ಅಪಾರ ಖೇದವಿದೆ. ಅವರು ಹೇಳುತ್ತಾರೆ, 'ನಾವು ಸಣ್ಣ ಹಳ್ಳಿಗಳಲ್ಲಿರಲಿ, ದೊಡ್ಡ ಪಟ್ಟಣಗಳಲ್ಲಿ ವಾಸಿಸಲಿ, ನಮ್ಮ ಮನೆಯಲ್ಲಿ ಅಥವಾ ಪರಿಸರದಲ್ಲಿರುವ ಪ್ರಾಣಿಗಳನ್ನು ಅರಿಯಲು ಯತ್ನಿಸಬೇಕು. ಇವುಗಳಲ್ಲಿ ಎಷ್ಟೋ ನಿರುಪದ್ರವಿಯಾಗಿರುತ್ತವೆ. ಆದರೆ ಅವಕ್ಕೆ ಹೆದರುವವರಿದ್ದಾರೆ. ದ್ವೇಷಿಸುವವರಿದ್ದಾರೆ. ಅಂಥವರ ಕಣ್ಣುಗಳಿಗೆ ಇವು ಗೋಚರಿಸುವುದಿಲ್ಲ. ಈ ಕರ್ಮಯೋಗಿಗಳು ತಮ್ಮ ದಿನಚರಿಯಲ್ಲಿ ಮೈಮರೆತಾಗ ನಿರೀಕ್ಷಿಸಿದರೆ ಅವುಗಳ ಜೀವನದ ಗುಟ್ಟು ತಿಳಿದು ನಮ್ಮ ಜೀವನಕ್ಕೂ ಹೆಚ್ಚಿನ ಅರ್ಥ ಬರುವುದು. ನಮ್ಮನ್ನು ಬಿಟ್ಟು ಉಳಿದ ಜೀವಿಗಳಿಗೆ ಶಾಂತಿಯುತ ಜೀವನ ನಡೆಸಲು ಅಧಿಕಾರವಿಲ್ಲವೆಂಬ ಭ್ರಮೆಯಿಂದ ಅವುಗಳನ್ನು ಕೊಲ್ಲದೆ ಸ್ನೇಹದ ದೃಷ್ಟಿಯಿಂದ ನೋಡಲು ಕಲಿಯಬೇಕು.'

## ಸಸ್ಯಪ್ರಪಂಚದ ಬೆಡಗು ಕೌತುಕಗಳು

ಸುತ್ತಮುತ್ತಲಿನ ಪರಿಸರದಲ್ಲಿ ಬೆಳೆಯುವ ಅಂದಚೆಂದದ ಗಿಡಮರಗಳನ್ನು ನೋಡಿ, ಅವುಗಳ ಉಪಯುಕ್ತತೆಯನ್ನು ಮನಗಂಡು ಅವುಗಳನ್ನು ಪ್ರೀತಿಸದೆ, ಆರಾಧಿಸದೆ, ಬೆಳಸದೆ ಇರದ ಮನುಷ್ಯರೇ ಇಲ್ಲವೇನೋ. ಪ್ರಕೃತಿಗೆ ಸೊಬಗನ್ನು, ಮನುಕುಲಕ್ಕೆ ಆಹಾರವನ್ನು ಒದಗಿಸುವುದರಲ್ಲಿ ಗಿಡ, ಮರಗಳ ಪಾತ್ರ ಮಹತ್ವಪೂರ್ಣವಾದುದು. ಪ್ರತಿಯೊಂದು ಗಿಡದ ಬೇರು, ಕಾಂಡ, ಗೆಲ್ಲು, ಎಲೆ, ಹೂ, ಹಣ್ಣುಗಳು ವೈವಿಧ್ಯಪೂರ್ಣವಾಗಿ, ಭಿನ್ನಸ್ವರೂಪದ್ದಾಗಿ ಇರುತ್ತವೆ. ಆತ್ಮರಕ್ಷಣೆಗೆ ಮುಳ್ಳುಗಳನ್ನು ಹೊಂದಿರುವ ಸಸ್ಯಗಳು, ಗೆಲ್ಲು, ಕಾಂಡಗಳನ್ನು ಕಡಿದರೆ ಮತ್ತೆ ಚಿಗುರಿ ನಳನಳಿಸುವ ಸಸ್ಯಗಳು, ಮಣ್ಣು, ನೀರಿನ ಸಂಪರ್ಕ ದೊರೆತರೆ ಮೊಳೆತು ಚಿಗುರೊಡೆದು ಬೆಳೆಯುವ ಬೀಜಗಳು, ಒಂದೇ ಎರಡೇ.. ಈ ರೀತಿಯ ಸಸ್ಯಲೋಕದ ಎಷ್ಟೋ ಬೆಡಗು, ಕೌತುಕಗಳನ್ನು ಕೃಷ್ಣಾನಂದ ಕಾಮತರ 'ಸಸ್ಯ ಪ್ರಪಂಚ' ಮತ್ತು 'ಸಸ್ಯ ಪರಿಸರ' ಗ್ರಂಥಗಳು ವಿವರಿಸುತ್ತವೆ.

ಸಸ್ಯಗಳಿಗೆ ಮಾನವನ ಹಾಗೆ ಚಲನಾಂಗಗಳು, ಮಿದುಳು, ವಿಚಾರಶಕ್ತಿ ಇಲ್ಲ. ಆದರೆ ಸಸ್ಯಗಳು ಕಾಲಕ್ಕನುಗುಣವಾಗಿ ತಮ್ಮ ಚಟುವಟಿಕೆಗಳನ್ನು ತಪ್ಪದೆ ನಡೆಸುತ್ತವೆ. ಅದು ಹೇಗೆ ಎಂಬುದನ್ನು ಲೇಖಕರ ಮಾತಿನಲ್ಲಿಯೇ ತಿಳಿದುಕೊಳ್ಳೋಣ.

ಸಸ್ಯಗಳ ಎಲ್ಲಾ ಅಂಗಾಂಗಗಳು ಏಕಸೂತ್ರತೆಯನ್ನು ಪಾಲಿಸುತ್ತವೆ. ಬೀಜ ಅಂಕುರಿಸಿದಾಗ, ಮೊದಲು ಬೇರು ಕಾಣಿಸಿಕೊಳ್ಳುತ್ತದೆ, ಆಮೇಲೆ ಎಲೆಗಳು ಗೋಚರಿಸುತ್ತವೆ. ನಿರ್ದಿಷ್ಟ ಕಾಲಕ್ಕೆ ಗೆಲ್ಲುಗಳು ಒಡೆದು ತೋರುತ್ತವೆ. ಬೇರು, ಕಾಂಡ ಬೆಳೆದು ಸಸ್ಯ ಪ್ರೌಢಾವಸ್ಥೆಗೆ ಬಂದ ಬಳಿಕ ಅದು ಹೂ, ಕಾಯಿ, ಹಣ್ಣುಗಳ ಉತ್ಪಾದನೆಯನ್ನು ಪ್ರಾರಂಭಿಸುತ್ತದೆ. ಯಾವುದೇ ಅಂಗಕ್ಕೆ ಗಾಯವಾದರೆ ಕೂಡಲೇ ಅಂಟು-ದ್ರವ್ಯ ಹೊರಹೊಮ್ಮಿಸಿ ಗುಣಪಡಿಸಿಕೊಳ್ಳುತ್ತದೆ. ಬೆಳೆಯುವ ತುದಿ ಮುರಿದರೆ, ಕಡಿದರೆ, ಬೇರೊಂದು ಕಡೆ ಕಾಂಡ ಹೊರಬೀಳುತ್ತದೆ. ಮಾಗಿಯಲ್ಲಿ ಎಲೆ ಉದುರುತ್ತದೆ, ವಸಂತದಲ್ಲಿ

ಎಳೆ ಚಿಗುರು ಕಾಣಿಸಿಕೊಳ್ಳುತ್ತದೆ. ಬಿದಿರು ಸರಿಯಾಗಿ ಹನ್ನೆರಡು ವರ್ಷಕ್ಕೊಮ್ಮೆ ಹೂ ಬಿಡುತ್ತದೆ. ಮುಂಜಾವಿನ ಹವಾಮಾನದಲ್ಲಿ ದಾಸವಾಳದ ಹೂ ಅರಳಿದರೆ, ರಾತ್ರಿರಾಣಿ ಹೂವಿಗೆ ಅರಳಿ ಸುವಾಸನೆ ಬೀರಲು ರಾತ್ರಿಯೇ ಆಗಬೇಕು. ಇದನ್ನೆಲ್ಲಾ ಸಸ್ಯಗಳು ಹೇಗೆ ನಡೆಸುತ್ತವೆ ಎಂಬ ಪ್ರಶ್ನೆ ಮೂಡುವುದು ಸಹಜ. ಕಾಲಕ್ಕನುಗುಣವಾಗಿ ನಡೆಯುವಂತಹ ಸಸ್ಯಜೀವನದ ಎಲ್ಲಾ ಚಟುವಟಿಕೆಗಳನ್ನು ಅಂಕಿತದಲ್ಲಿ ಇಡುವಂತಹ 'ಸಸ್ಯಗಡಿಯಾರ'ವು ರಾಸಾಯನಿಕ ರೂಪದಲ್ಲಿ ಸಸ್ಯಗಳ ಅಂಗಾಂಗದಲ್ಲಿಯೇ ಅಡಕವಾಗಿದೆ. ಇದರ ಕಾರ್ಯನಿರ್ವಹಣೆಯ ಮೇಲೆ ಉಷ್ಣತೆ, ಕತ್ತಲೆ ಮತ್ತು ಬೆಳಕು ಪ್ರಭಾವ ಬೀರುತ್ತದೆ ಎಂದು ಲೇಖಕ ತಿಳಿಸುತ್ತಾರೆ.

ದೊಡ್ಡ ದೊಡ್ಡ ಮರಗಳು ಗಮನವನ್ನು ಸೆಳೆಯುವುದು ಸುಲಭ. ಅವುಗಳ ಗಾತ್ರ, ಅವುಗಳಲ್ಲಿ ಬೆಳೆಯುವ ಹೂ, ಹಣ್ಣುಗಳೇ ಅವುಗಳ ಆಕರ್ಷಣೆಯಾಗಿರುತ್ತವೆ. ಆದರೆ ಈ ಭೂಮಿಯ ಮೇಲೆ ಸುಮಾರು 1350 ಲಕ್ಷ ವರ್ಷಗಳಿಂದ ಬದುಕು ಸಾಗಿಸುತ್ತಿರುವ 'ಸಸ್ಯಲೋಕದ ಕುಬ್ಜರ' ಕುರಿತು ತಿಳಿದುಕೊಂಡರೆ ವಿಸ್ಮಯ, ಆಶ್ಚರ್ಯ ಹುಟ್ಟುವುದಂತೂ ಖಂಡಿತ. ಪ್ರಾಣಿಜಗತ್ತಿನ ಇರುವೆಗೆ ಸಮಾನವೆನಿಸುವ ಈ ಕುಬ್ಜ ಸಸ್ಯವರ್ಗ ಸರ್ವವ್ಯಾಪಿ. ಅದು ಕಾಣಿಸದ ಜಾಗವೇ ಇಲ್ಲವೆನ್ನಬಹುದು. ಕಲ್ಲುಗಳ ಸಂದಿ, ರಸ್ತೆಯಂಚು, ಹೊಲ, ಬಯಲು, ಕಾಡು, ಬೆಟ್ಟ, ಗುಡ್ಡ, ಪರ್ವತ ಹೀಗೆ ಎಲ್ಲೆಡೆ ಇವು ಚಿಗುರಿ ತಲೆಯೆತ್ತಿ ನಿಲ್ಲುತ್ತವೆ. ಸೂಸುಮಣ್ಣು, ಆರ್ದ್ರತೆ ದೊರೆತ ಕೂಡಲೇ ಬೀಜ ಕವಚ ಬಿರಿದು ಮೊಳೆತು ಬೆಳೆದು ನೆಲದಲ್ಲೆಲ್ಲಾ ಹರಡಿಕೊಳ್ಳುವ ಈ ಸಸ್ಯಗಳ ಪರಿಯೇ ವಿಸ್ಮಯಕಾರಿ. ನೀಲಿ, ಹಳದಿ, ಕೆಂಪು, ನೇರಿಳೆ, ಬಿಳಿ ಹೂಗಳಿಂದ ಭೂಮಿಯನ್ನು ಅಲಂಕರಿಸುವ ಈ ಸಸ್ಯಗಳ ಆಯಸ್ಸು ಕೆಲವೇ ದಿನಗಳದ್ದು. ಆದರೆ ಅದರ ಚಟುವಟಿಕೆ ಪಾದರಸದ ಚಲನೆಗೆ ಸಮಾನವಾದುದು. ಈ ಪುಟಾಣಿ ಸಸ್ಯಗಳ ಉಪಯೋಗವೇನು ಎಂದು ಬಲ್ಲಿರಾ? ಈ ಗಿಡಗಳ ಮಧುಪಾನ ಮಾಡಲು 'ಕೃಶದೇಹಿ, ಉದ್ದಮೂಗಿ, ಕೊಂಬಣ್ಣ, ಮುಕ್ಕಣ್ಣ, ತಲೆಗೊಂಬಪ್ಪ, ಡೊಳ್ಳಯ್ಯ, ಗಾನಕೋಕಿಲಗಳು' (ಕೀಟಸಮೂಹ) ಧಾವಿಸಿ ಬರುತ್ತವಂತೆ. ಮಾವು,

ಗೋಡಂಬಿ, ಸೀಗೆಮರಗಳು ಹೂ ಬಿಡದಿದ್ದಾಗ ಜೇನ್ನೊಣಗಳೂ ಈ ಕಿರಿಹೂಗಳ ಮೇಲೆ ದಾಳಿ ಇಡುತ್ತವಂತೆ. ಪುಟ್ಟ ಪುಟ್ಟ ಹಕ್ಕಿಗಳು ಇದರ ಹಣ್ಣುಗಳನ್ನು ಗೂಡಿಗೆ ಕೊಂಡೊಯ್ದು ಮರಿಗಳಿಗೆ ಗುಟುಕು ಕೊಡುತ್ತವಂತೆ. ಕೆಲಜಾತಿಯ ಇರುವೆಗಳು ಇದರ ಕಾಯಿ, ಹಣ್ಣುಗಳ ಬೀಜಗಳನ್ನು ಕಚ್ಚಿಕೊಂಡು ತಮ್ಮ ಉಗ್ರಾಣಕ್ಕೆ ಸೇರಿಸುವುದೂ ಉಂಟಂತೆ! ಮನುಷ್ಯರು ಕೂಡ ಕೆಲಜಾತಿಯ ಒಂದೆಲೆ ಕಿರುಸಸ್ಯಗಳಿಂದ ರುಚಿಕರವಾದ ಚಟ್ನಿ, ಗೊಜ್ಜು, ತಂಬುಳಿಗಳನ್ನು ತಯಾರಿಸುತ್ತಾರೆ. ಈ ಕಿರುಸಸ್ಯಗಳ ಬೇರುಗಳ ರಾಶಿ ಜಾಲದಂತೆ ಹೆಣೆದುಕೊಂಡಿರುವುದರಿಂದ ನೆಲದ ಸತ್ವ ಮಳೆ, ಗಾಳಿ, ಮಂಜಿನ ನೀರಿಗೆ ಬಳಿದುಕೊಂಡು ಹೋಗುವುದಿಲ್ಲವಂತೆ!! ಗಾತ್ರದಲ್ಲಿ ಇಷ್ಟುದ್ದ, ಉಪಯುಕ್ತತೆಯಲ್ಲಿ ಅಷ್ಟುದ್ದವೆನಿಸುವ ಈ ಕಿರು ಸಸ್ಯಗಳು ನಾಶವಾದರೆ ಫಲಭರಿತ ನೆಲ ಮರುಭೂಮಿಯಾಗುವುದು ಖಂಡಿತವೆನ್ನುತ್ತಾರೆ ಲೇಖಕರು.

ಚೆಂದದ ಗುಲಾಬಿ ಹೂವನ್ನು ಕಿತ್ತುಕೊಳ್ಳಲು ಹೋಗಿ ಮುಳ್ಳಿನಿಂದ ಚುಚ್ಚಿಸಿಕೊಂಡ ಅನುಭವ ಎಲ್ಲರಿಗೂ ಇರುತ್ತದೆ. ಇಂತಹ ಚೆಂದದ ಹೂವಿನ ಗಿಡಕ್ಕೆ ಮುಳ್ಳಿನ ಕಂಟಕ ಯಾಕೆ? ಎಂದು ಗೊಣಗಾಡಿಕೊಳ್ಳುವವರಿಗೇನೂ ಕಡಿಮೆ ಇಲ್ಲ. ಆದರೆ 'ಸಸ್ಯಗಳ ಪ್ರತಿಯೊಂದೂ ಅಂಗಾಂಗಕ್ಕೂ ಒಂದು ವಿಶಿಷ್ಟ ಅರ್ಥವಿರುವಂತೆ ಮುಳ್ಳುಗಳೂ ಅನೇಕ ಚಟುವಟಿಕೆಗಳಿಂದ ಕೂಡಿರುತ್ತವೆ' ಎಂದು ಸಸ್ಯ ಮುಳ್ಳುಗಳ ಮಹಾತ್ಮೆಯನ್ನು ಲೇಖಕರು ವಿವರಿಸುತ್ತಾರೆ. ಸಸ್ಯದ ಸುಪ್ತಾಂಗಗಳನ್ನು ತೊಗಟೆ ಸಂರಕ್ಷಿಸಿದರೆ, ತೊಗಟೆಗೆ ಮುಳ್ಳುಗಳೇ ರಕ್ಷಣೆ. ಸಾಮಾನ್ಯವಾಗಿ ಮುಳ್ಳುಗಳು ನಿರ್ಜೀವವಾದ್ದರಿಂದ ಅವುಗಳನ್ನು ಬೊಡ್ಡೆಯಿಂದ ಬೇರ್ಪಡಿಸುವುದು ಸುಲಭ. ಆದರೆ ಗಿಡದ ಜೊಂಗೆಯೇ ಮುಳ್ಳಾಗಿ ಬೆಳೆದರೆ ಅವುಗಳಿಗೆ ನೀರು, ಆಹಾರ ಪೂರೈಕೆಯಾಗುತ್ತದೆ. ಈ ಮುಳ್ಳುಗಳಿಗೆ ಎಲೆ, ಮಿಡಿ, ಕಾಯಿ, ಹಣ್ಣು ಆವರಿಸುವಂತಾದಾಗ ಸಸ್ಯಲೋಕದ ಪವಾಡ ಗೋಚರಿಸುತ್ತದೆ ಎಂದು ಲೇಖಕರು ತಿಳಿಸುತ್ತಾರೆ. ಕೆಲವೊಮ್ಮೆ ಇಡೀ ಸಸ್ಯವೇ ಮುಳ್ಳುಮಯವಾಗಿರುವುದೂ ಉಂಟಂತೆ! ಇಂತಹ ಕಂಟಿಗಳನ್ನು

ಬೇಲಿಯಾಗಿ ಹೊಲಗಳಲ್ಲಿ ಹರಡಿ ಪೈರನ್ನು ಪಶು, ಪಕ್ಷಿಗಳಿಂದ ರಕ್ಷಿಸಿಕೊಳ್ಳುವ ಜಾಣತನವನ್ನು ಕೃಷಿಕ ತೋರುವುದುಂಟು. ಮುಳ್ಳುಗಳು ಗಿಡಗಳಿಗೆ ಆತ್ಮರಕ್ಷಕ ಆಯುಧಗಳ ಹಾಗೆ. ಕೆಲವು ಸಸ್ಯಗಳ ಮುಳ್ಳುಗಳು ತಮ್ಮ ಗಾತ್ರದಿಂದಲೇ ಪ್ರಾಣಿಗಳ ಎದೆಯಲ್ಲಿ ಭಯ ಹುಟ್ಟಿಸುತ್ತವೆ. ಇನ್ನು ಕೆಲವು ಮುಳ್ಳುಗಳು ಚುಚ್ಚುಮದ್ದಿನ ಸೂಜಿಯಂತೆ ರಾಸಾಯನಿಕವನ್ನು ದೇಹಕ್ಕೆ ಸೇರಿಸುವುದರಿಂದ ಪ್ರಾಣಿಗಳು ಮೈ ಉರಿಗೆ ಬಲಿಯಾಗಿ ಮತ್ತೆ ಅಂತಹ ಸಸ್ಯಗಳ ಸುದ್ದಿಗೇ ಬರಲಾರವು. ಕಿರುಸಸ್ಯಗಳ ಎಲೆಗಳ ತುದಿಗಳು ಸೂಜಿಯಂತೆ ಚೂಪಾಗಿರುವುದರಿಂದ ಅದರ ಮೇಲೆ ಕಾಲಿಟ್ಟವರಿಗೆ ನರಕಯಾತನೆ ಖಂಡಿತ. ಮುಳ್ಳಿನಿಂದ ಆವೃತವಾಗಿರುವ ಕಾಯಿ, ಹಣ್ಣುಗಳು ಅಪರೂಪವೇನಲ್ಲ. ಹಲಸಿನಕಾಯಿ, ಹಾಗಲಕಾಯಿ, ಸೌತೆಕಾಯಿ, ಸೀಮೆ ಬದನೆಕಾಯಿ ಇವೆಲ್ಲವೂ ಮುಳ್ಳುಗಳನ್ನು ಹೊಂದಿರುವಂತಹವುಗಳೇ. ಆದರೆ ಇವುಗಳಲ್ಲಿ ಕೆಲವು ತೋರಿಕೆಯ ಮುಳ್ಳುಗಳಾಗಿರುವುದರಿಂದ ಬೇರೆಯವರಿಗೆ ಇವುಗಳಿಂದ ಹೆಚ್ಚಿನ ಅಪಾಯ ಒದಗುವುದಿಲ್ಲ. ಬೀಜಕ್ಕೆ ಮುಳ್ಳು ಬರಿಸಿ ಪ್ರಸರಣಕ್ಕೆ ಅನುಕೂಲ ಮಾಡುವ ಬುದ್ಧಿವಂತ ಸಸ್ಯಗಳೂ ಇರುತ್ತವೆ. ಗಿಡಗಳ ಸಮೀಪ ಹಾದು ಹೋಗುವವರ ಬಟ್ಟೆಗೆ ಈ ಮುಳ್ಳುಗಳು ಅಂಟಿಕೊಂಡರೆ ಸಾಕಲ್ಲ, ದೂರದೂರದವರೆಗೆ ಬೀಜಪ್ರಸರಣವಾಗಿಯೇ ಬಿಡುವುದು, ಹೇಗಿದೆ ಸಸ್ಯಗಳ ಈ ಚಮತ್ಕಾರ! ಆದರೆ ಮುಳ್ಳುಗಳನ್ನು ಹೊಂದಿರದ ಸಸ್ಯಗಳಿಗೆ ಪ್ರಾಣಿಗಳ ಧ್ವಂಸಾಚಾರದಿಂದ ನಿರ್ನಾಮ ಖಂಡಿತ.

ಹೂ ಕೋಮಲ, ಅಲ್ಪಾಯು. ಗಳಿಗೆ, ಗಂಟೆ, ದಿನದ ಲೆಕ್ಕದಲ್ಲಿ ಅದರ ಆಯಸ್ಸು ಮುಗಿದೇ ಹೋಗುತ್ತದೆ. ಅರಳಿದ ಹೂ ಮನಸ್ಸಿಗೆ ಮುದ ನೀಡಿದರೆ ಬಾಡಿದ ಹೂ ಮನಸ್ಸಿಗೆ ಖೇದವನ್ನು ಉಂಟುಮಾಡುತ್ತದೆ. ರಂಗುರಂಗಿನ ಪಕಳೆಗಳು ಉದುರಿ, ಮಧುಪಾತ್ರೆ ಸುವಾಸನೆಯನ್ನು ಹೊರಗೆಡವಿದ ಬಳಿಕ ಹೂವಿನ ಜೀವನ ಮುಗಿದೇ ಹೋಯಿತು ಎಂಬುದು ಮನುಷ್ಯನ ಕಲ್ಪನೆ. ಅದು ಹಾಗಲ್ಲ ಎನ್ನುತ್ತಾರೆ ಕೃಷ್ಣಾನಂದ ಕಾಮತ್. ಬಾಹ್ಯವೇಷವನ್ನು ಕಳಚಿಕೊಂಡ ಬಳಿಕ ಹೂ ಫಲನಿರ್ಮಾಣ ಕಾರ್ಯದಲ್ಲಿ ತೊಡಗಿಕೊಳ್ಳುತ್ತದೆ. ಮಿಡಿಕಾಯಿ ಬೆಳೆದು ಹಣ್ಣಾಗುತ್ತದೆ. ಮಲ್ಲಿಗೆ, ಜಾಜಿ,

ಸಂಪಿಗೆ, ಗುಲಾಬಿ ಈ ಎಲ್ಲ ಹೂ ಗಿಡಗಳಿಗೂ ಕಾಯಿ ಹಣ್ಣುಗಳು ಆಗುತ್ತವೆ ಎಂದರೆ ಅದು ಅಚ್ಚರಿಯ ಮಾತಲ್ಲವೇ?

ಪ್ರಾಣಿವರ್ಗ, ಪಕ್ಷಿವರ್ಗಕ್ಕೆ ಬದುಕಿನ ಕಾಲಾವಧಿ ನಿಶ್ಚಿತವಾಗಿರುತ್ತದೆ. ಮನುಷ್ಯ, ಪ್ರಾಣಿ, ಪಕ್ಷಿಗಳು ಸಾವಿಗೆ ಶರಣಾಗಿ ಜೀವನವನ್ನು ಕೊನೆಗಾಣಿಸುತ್ತವೆ. ಅದೇ ರೀತಿ ಸಸ್ಯಗಳಿಗೂ ಅಂತ್ಯವಿರುತ್ತದೆ. ಆದರೆ ಸಾವಿರಾರು ವರ್ಷಗಳವರೆಗೆ ಬದುಕಿ ಉಳಿದ ಮರಗಳು ಇವತ್ತಿಗೂ ಕಾಣಲು ಸಿಗುತ್ತವೆ. ಇನ್ನು ಪರಾಗ, ಬೀಜದ ರೂಪದಲ್ಲಿ ಸಸ್ಯಗಳು ಸಹಸ್ರಾರು ವರ್ಷಗಳ ಕಾಲ ಸುಪ್ತವಾಗಿ ಭೂಗರ್ಭದಲ್ಲಿ ಇದ್ದಂತಹ ಉದಾಹರಣೆಯನ್ನು ಕೃಷ್ಣಾನಂದ ಕಾಮತರು ನೀಡಿದಾಗ ಸಸ್ಯಲೋಕದ ವಿಸ್ಮಯಾತಿ ವಿಸ್ಮಯಕ್ಕೆ ಬೆರಗುಗೊಳ್ಳುವ ಸರದಿ ನಮ್ಮದು. ಮಾನವನಿಗೆ ಅರಣ್ಯಗಳಿಂದ ಪ್ರತ್ಯಕ್ಷ ಹಾಗೂ ಪರೋಕ್ಷ ಲಾಭಗಳಿವೆ. ಕಾಡಿನ ಮರಗಳಿಂದ ಬೀಜ, ಎಣ್ಣೆಕಾಳು, ಗಂಧ, ಚಂದನ, ನೆಣ, ತೊಗಟೆ, ಅರಗು, ಮದ್ದು ಇತ್ಯಾದಿ. ಕಾಗದ, ಕೃತಕ ನಾರು, ಪ್ಲಾಯ್‌ವುಡ್‌ಗೆ ಕಚ್ಚಾ ಮಾಲು ದೊರೆಯುತ್ತವೆ. ಮರಗಳು ವಿವಿಧ ಕೀಟ, ಪಶು–ಪಕ್ಷಿಗಳಿಗೆ ಆಶ್ರಯವಾಗಿರುತ್ತವೆ.

ಸಸ್ಯಲೋಕದ ಜೀವಂತಿಕೆಯನ್ನು ಅದರ ಉಪಯೋಗವನ್ನು ತಿಳಿದ ಬಳಿಕ ಅದನ್ನು ಕಾಪಾಡಿಕೊಂಡು ಬರುವ ಕರ್ತವ್ಯ ನಮ್ಮದಾಗಬೇಕು ಎನ್ನುತ್ತಾರೆ ಈ ಲೇಖಕರು. ಅರಣ್ಯವೆಂಬುದು ಮರಗಳ ಸಮೂಹವಾಗಿರದೇ ಅದೊಂದು ಜೀವಂತ ಪರಿಸರವಾಗಿದೆ. ಅಲ್ಲಿ ನಡೆಯುವ ಲಕ್ಷಾಂತರ ವ್ಯಾಪಾರಗಳು ಒಂದನ್ನೊಂದು ಅವಲಂಬಿಸಿರುತ್ತವೆ. ಕೀಟ, ಪಶು, ಪಕ್ಷಿಗಳ ನಡುವೆ ಆಹಾರ ಸರಪಳಿ ಇರುತ್ತದೆ. ಇದರ ಒಂದು ಕೊಂಡಿ ಕಳಚಿದರೂ, ಎಲ್ಲ ಅಸ್ತವ್ಯಸ್ತವಾಗುವುದು. ನಮ್ಮ ಪಾಲಿಗೆ ಪ್ರಕೃತಿದತ್ತವಾಗಿ ಬಂದಿರುವ ವನಸಿರಿಯನ್ನು ಆನಂದಿಸುವ ಕಲೆಯನ್ನು ನಾವು ಕರಗತ ಮಾಡಿಕೊಳ್ಳಬೇಕು. ನಾವು ನಿಸರ್ಗಪ್ರೇಮಿಗಳಾಗಬೇಕು ಎನ್ನುತ್ತಾರೆ.

ನಿಸರ್ಗ ಪ್ರೇಮವೆಂದರೇನು? ನಿಸರ್ಗದ ಬಾಹ್ಯ ಸೌಂದರ್ಯವನ್ನು ಆಸ್ವಾದಿಸುವುದೇ ಅಥವಾ ನಿಸರ್ಗದ ಮೌಲ್ಯವನ್ನು ಅರಿತುಕೊಳ್ಳುವುದೇ? ನಿಸರ್ಗದ ಬಾಹ್ಯ ಸೌಂದರ್ಯವನ್ನು ತಿಳಿದುಕೊಂಡು, ಅದರ ಮೌಲ್ಯವನ್ನು

ಆಧರಿಸಿ ನಿಸರ್ಗದ ಮೂಲ ಸ್ವರೂಪವನ್ನು ಉಳಿಸಿ ಬೆಳೆಸುವುದರ ಕಡೆಗೆ ಗಮನ ಹರಿಸುವುದನ್ನು ನಿಸರ್ಗಪ್ರೇಮ ಎಂದು ಹೇಳಬಹುದು. ಕೃಷ್ಣಾನಂದ ಕಾಮತರು ನಿಸರ್ಗದ ಕುರಿತು ತಿಳಿಸುವಾಗ ಜೈವಿಕ ಪರಿಸರಕ್ಕೆ ಆದ್ಯತೆಯನ್ನು ನೀಡುತ್ತಾರೆ.

ಕಾಮತರು ಈ ವೈಜ್ಞಾನಿಕ ಶಾಸ್ತ್ರಗ್ರಂಥಗಳನ್ನು ಯಾಕೆ ಬರೆದರು ಎನ್ನುವ ಪ್ರಶ್ನೆಗೆ ಅವರಿಂದಲೇ ಉತ್ತರ ಹೇಳಿಸೋಣ, 'ದೇಶದ ಸರ್ವತೋಮುಖ ಅಭಿವೃದ್ಧಿಯಾಗಬೇಕಾದರೆ ಪ್ರಜೆಗಳು ವೈಜ್ಞಾನಿಕ ಮನೋಭಾವ ಬೆಳೆಸಿ ಕೊಳ್ಳುವುದು ಅತ್ಯವಶ್ಯ. ಪಾಶ್ಚಿಮಾತ್ಯರು ಜನಸಾಮಾನ್ಯರು ತಿಳಿದುಕೊಳ್ಳುವಂತಹ ಸುಲಭ ಭಾಷೆಯಲ್ಲಿ ವೈಜ್ಞಾನಿಕ ಪುಸ್ತಕಗಳನ್ನು ಪ್ರಕಟಿಸುತ್ತಾರೆ. ನಮ್ಮ ದೇಶದಲ್ಲಿ ಬಹುಸಂಖ್ಯಾತರಿಗೆ, ಸಾಮಾನ್ಯ ಜನರಿಗೆ ವಿಜ್ಞಾನ ಕರಗಿಸಿಕೊಳ್ಳಲಾಗದ ಕಡಲೆಕಾಯಿಯಾಗಿ ಉಳಿದಿದೆ. ವಿಜ್ಞಾನದ ತಿಳಿವಳಿಕೆಗಾಗಿ ಮತ್ತು ಪ್ರಾಣಿ ಪ್ರಪಂಚದಲ್ಲಿ ಆಸಕ್ತಿ ಹುಟ್ಟಿಸಲೆಂದು ನಾನು ಈ ಗ್ರಂಥಗಳನ್ನು ಬರೆದೆ.'

## ಅಪರೂಪದ ಅಲೆಮಾರಿ: ವಿಶ್ವಸಂಚಾರಿ

ಪ್ರವಾಸಕ್ಕೆ ಹೋಗುವುದು ಎಲ್ಲರೂ ಇಷ್ಟಪಡುವ ಸಂಗತಿ. ಪ್ರವಾಸಗಳು ಮನರಂಜನೆಯೊಂದಿಗೆ, ದಿನನಿತ್ಯದ ಜಂಜಾಟದಿಂದ, ಕೆಲಸ ಕಾರ್ಯಗಳಿಂದ ಬಳಲಿದ ದೇಹ ಮತ್ತು ಮನಸ್ಸಿಗೆ ಅಗತ್ಯವಿರುವ ಉಲ್ಲಾಸ, ಹುರುಪನ್ನು ನೀಡುತ್ತವೆ; ಹೊಸ, ಹೊಸ ಊರುಗಳನ್ನು ಸಂದರ್ಶಿಸುವ ಅವಕಾಶವನ್ನು ಒದಗಿಸುತ್ತವೆ. ಪ್ರವಾಸಗಳಲ್ಲಿ ಚಾರಿತ್ರಿಕ ಮಹತ್ವವಿರುವ ಸ್ಥಳಗಳನ್ನು, ಧಾರ್ಮಿಕ ತಾಣಗಳನ್ನು ನೋಡಲು ಬಯಸುವವರು ಜಾಸ್ತಿ.

ಕೃಷ್ಣಾನಂದ ಕಾಮತ್ ಪ್ರವಾಸಪ್ರಿಯರು. ದೇಶ, ವಿದೇಶಗಳ ವ್ಯಾಪಕ ಪರ್ಯಟನೆ ನಡೆಸಿದವರು. ಹೆಚ್ಚಿನ ಪ್ರವಾಸಗಳನ್ನು ಸ್ವಯಂಪ್ರೇರಿತವಾಗಿ ಕೈಗೊಂಡವರು. ಹೊಸ ದೇಶ, ಹೊಸ ಊರು ನೋಡಬಹುದೆನ್ನುವ ಉತ್ಸಾಹದಿಂದಲೇ ಉನ್ನತ ಶಿಕ್ಷಣಕ್ಕೆ ಹೊರಟು ನಿಂತವರು. ಅವರ ಬಹುಪಾಲು ಪ್ರವಾಸಗಳು ಶೈಕ್ಷಣಿಕ ಹಿನ್ನೆಲೆ ಹೊಂದಿರುವಂತಹವು. ಕಾಮತರಿಗೆ ಹೊಸ ಊರನ್ನು ನೋಡುವ ಆಸಕ್ತಿಗಿಂತ ಅಲ್ಲಿಯ ಜನರನ್ನು,

ಅವರ ಜೀವನವಿಧಾನವನ್ನು ತಿಳಿದುಕೊಳ್ಳುವುದರಲ್ಲಿ ಹೆಚ್ಚು ಕುತೂಹಲ. ಅವರು ಪ್ರವಾಸಗಳಿಂದ ಪಡೆಯುತ್ತಿದ್ದ ಅನುಭವ ಮಾನವಶಾಸ್ತ್ರಜ್ಞನ ಅವಲೋಕನದ ರೀತಿಯವು.

ಹೊಸ ಊರುಗಳಲ್ಲಿ ಅಲೆದಾಟ, ತಿರುಗಾಟ ನಡೆಸುವುದು ಕೃಷ್ಣಾನಂದರಿಗೆ ಬಾಲ್ಯದಿಂದ ಅಂಟಿಕೊಂಡಿದ್ದ ಗೀಳು. ಅವರು ಶಾಲಾ ವಿದ್ಯಾರ್ಥಿಯಾಗಿದ್ದಾಗ ಗೇರು, ನೇರಳ, ಚಾಂಪೇಡ, ಮುಳ್ಳುಹಣ್ಣುಗಳನ್ನು ಹುಡುಕಿಕೊಂಡು, ಹರಿವ ಹೊಳೆ, ನದಿ, ಧುಮ್ಮಿಕ್ಕುವ ಜಲಪಾತಗಳ ಆಕರ್ಷಣೆಯಲ್ಲಿ ಸಮಾನ ಮನಸ್ಕ ಗೆಳೆಯರ 'ಸುಕೀರ್ತಿ ಸಂಘ' ಕಟ್ಟಿಕೊಂಡು ಬರಿಗಾಲಿನಲ್ಲಿ ಕಾಡುಮೇಡು, ಹಳ್ಳಿಯೂರುಗಳಲ್ಲಿ ಸುತ್ತಾಡುತ್ತಿದ್ದರು. ಈ ತಿರುಗಾಟಗಳಿಗೆ ನಿಶ್ಚಿತ ಗುರಿಯಿಲ್ಲ. ಆದರೆ ಕಂಡಲ್ಲಿ ನಿದ್ದೆ, ಸ್ನಾನ, ಊಟವೆಂದು ಪ್ರಕೃತಿಯ ಮಡಿಲಿನಲ್ಲಿ ಕಾಲಕಳೆಯುವ ಅನುಭವ ದೊರೆಯುತ್ತಿತ್ತು. ಇದು ಮುಂದಿನ ದೂರ ದೂರದ ಕ್ಲಿಷ್ಟ ಪ್ರವಾಸಗಳಲ್ಲಿ ಅವರ ನೆರವಿಗೆ ಬಂದಿರಬಹುದು.

ಅವರು ಕಾಲೇಜು ಶಿಕ್ಷಣಕ್ಕಾಗಿ ಹುಟ್ಟೂರು ಹೊನ್ನಾವರದಿಂದ ಧಾರವಾಡಕ್ಕೆ ಪ್ರಯಾಣ ಬೆಳೆಸಿ ಅಲ್ಲಿ ಪದವಿ, ಸ್ನಾತಕೋತ್ತರ ಪದವಿ, ಕಿರು ಅವಧಿಯ ಉದ್ಯೋಗದ ಬಳಿಕ ಪಿಹೆಚ್.ಡಿ. ಸಂಶೋಧನೆಗಾಗಿ ಅಮೇರಿಕೆಗೆ ಹೋದರು. ವಿದೇಶದಿಂದ ಹಿಂತಿರುಗಿ ಬಂದ ಬಳಿಕ ರಾಜಸ್ಥಾನ, ಪಶ್ಚಿಮ ಬಂಗಾಲ ರಾಜ್ಯಗಳಲ್ಲಿ ಉದ್ಯೋಗ ನಿರ್ವಹಿಸಿದರು. ಆಮೇಲೆ ಬುಡಕಟ್ಟು ಅಧ್ಯಯನಕ್ಕಾಗಿ ಮಧ್ಯಪ್ರದೇಶಕ್ಕೆ ತೆರಳಿದರು. ಕರ್ನಾಟಕದಲ್ಲಿ ನೆಲೆನಿಂತ ಬಳಿಕ ಚಿತ್ರಕಲೆ, ಛಾಯಾಗ್ರಹಣದ ಹವ್ಯಾಸಗಳನ್ನು ಮುಂದಿಟ್ಟು ರಾಜ್ಯದಾದ್ಯಂತ ಪ್ರವಾಸ ಕೈಗೊಂಡರು. ಕಾಲಿಗೆ ಚಕ್ರ ಕಟ್ಟಿಕೊಂಡಂತೆ ಹಲವು ದಶಕಗಳನ್ನು ಪ್ರವಾಸದಲ್ಲಿ ಕಳೆದವರು ಕಡಿಮೆ. ತಮ್ಮ ಎಲ್ಲಾ ಪ್ರವಾಸಗಳ ಅನುಭವವನ್ನು ದಾಖಲಿಸಿದವರು ಇನ್ನೂ ಕಡಿಮೆ. ಈ ಕಾರಣಕ್ಕಾಗಿ ಕೃಷ್ಣಾನಂದ ಕಾಮತರು ಅಪರೂಪದ ಅಲೆಮಾರಿಯಾಗಿ ಗಮನ ಸೆಳೆಯುತ್ತಾರೆ. ಅವರ ಪ್ರವಾಸ ಕಥನಗಳು ಆಯಾ ದೇಶ, ರಾಜ್ಯಗಳ ಸಾಮಾಜಿಕ, ಸಾಂಸ್ಕೃತಿಕ ಅಧ್ಯಯನಗಳಾಗಿವೆ.

ಸುಮಾರು ನಾಲ್ಕೂವರೆ ದಶಕಗಳ ಹಿಂದೆ ಕೃಷ್ಣಾನಂದರು ಕಂಡ ಅಮೇರಿಕಾ ದೇಶ ಹಾಗೂ ಈಗಿನ ಅಮೇರಿಕಾ ದೇಶಕ್ಕೆ ಬಹಳ ಅಂತರವಿದೆ. ಆಗ ಅಸಾಧಾರಣ ಪ್ರತಿಭೆ ಇದ್ದವರಿಗೆ ಮಾತ್ರ ಅಮೇರಿಕೆಯಲ್ಲಿ ಉನ್ನತ ಶಿಕ್ಷಣ ಪಡೆಯುವ ಅವಕಾಶವಿತ್ತು. ಇನ್ನು ತಾಂತ್ರಿಕವಾಗಿ, ಆರ್ಥಿಕವಾಗಿ ಹೆಚ್ಚು ಮುಂದುವರಿಯದಿದ್ದ ಭಾರತದಿಂದ ಶಿಕ್ಷಣ, ಉದ್ಯೋಗವೆಂದು ಅಮೇರಿಕೆಗೆ ಪ್ರಯಾಣ ಬೆಳೆಸುತ್ತಿದ್ದ ಯುವಜನಾಂಗ ಅಲ್ಲಿಯ ಐಷಾರಾಮಿ ಬದುಕಿಗೆ ಮರುಳಾಗಿ ಸ್ವದೇಶಕ್ಕೆ ಹಿಂತಿರುಗುವ ಮನಸ್ಸು ಮಾಡುತ್ತಿರಲಿಲ್ಲ. ಇಂತಹ ಪರಿಸರದಲ್ಲಿ ಅಮೇರಿಕೆಗೆ ಪ್ರಯಾಣ ಬೆಳೆಸಿದ ಕೃಷ್ಣಾನಂದ ಕಾಮತರು ನಾಲ್ಕು ವರ್ಷಗಳ ಕಾಲ ವಿದೇಶದಲ್ಲಿ ನೆಲೆ ನಿಂತು ಸಂಶೋಧನೆ, ಅಧ್ಯಯನಗಳೊಂದಿಗೆ ಸುಮಾರು ಹದಿನೈದು ಸಾವಿರ ಮೈಲು ಪ್ರವಾಸಮಾಡಿ ಅಮೇರಿಕೆಯ ಹೆಚ್ಚಿನ ಪ್ರಾಂತಗಳನ್ನು ಸುತ್ತಾಡಿದರು. ಸಮಯ ಸಿಕ್ಕಿದಾಗಲೆಲ್ಲಾ ಅಮೇರಿಕನ್ ಸ್ನೇಹಿತರೊಂದಿಗೆ, ಅಮೇರಿಕನ್ ಕುಟುಂಬಗಳೊಂದಿಗೆ ಕಾಲ ಕಳೆದು ಭಾರತೀಯನಾಗಿದ್ದುಕೊಂಡು ಅಮೇರಿಕನ್ನರನ್ನು ತಿಳಿದುಕೊಳ್ಳುವ ಪ್ರಯತ್ನವನ್ನು ನಡೆಸಿದರು. 'ನಾನು ಓದಿ ತಿಳಿದುಕೊಂಡ ಜನಜೀವನಕ್ಕೂ, ಪ್ರತ್ಯಕ್ಷ ಕಂಡ ಅಮೇರಿಕನ್ ಜನಜೀವನಕ್ಕೂ ಅಜಗಜಾಂತರ'ವೆಂಬುದನ್ನು ಕಂಡುಕೊಂಡ ಅವರು ಅಮೇರಿಕೆಯ ಜನರಲ್ಲಿ ಭಾರತೀಯರ ಕುರಿತು ಹೊಸ ಅರಿವನ್ನು ಮೂಡಿಸಿದರು. ಜೊತೆಗೆ ಅಮೇರಿಕೆಯ ಸಾಮಾಜಿಕ ಜೀವನದಲ್ಲಿ ಹಾಸುಹೊಕ್ಕಾಗಿರುವ ಕೆಲವು ಸಮಸ್ಯೆಗಳಿಗೆ ಕಾರಣವೇನೆಂಬುದನ್ನು ಹುಡುಕುವ ಪ್ರಯತ್ನ ನಡೆಸಿದರು. ನೆಲದ ಸಂಸ್ಕೃತಿ ರೂಪುಗೊಳ್ಳುವುದರಲ್ಲಿ ಪ್ರಾಕೃತಿಕ ಅಂಶಗಳು, ಪ್ರಗತಿಯ ಪಥದಲ್ಲಿ ಮಾನವ ನಡೆಸುವ ಪ್ರಯತ್ನಗಳು ಹೇಗೆ ಕಾರಣವಾಗುತ್ತವೆ ಎಂಬುದರ ಚರ್ಚೆಯನ್ನು ಅವರು 'ನಾನೂ ಅಮೇರಿಕೆಗೆ ಹೋಗಿದ್ದೆ' ಪ್ರವಾಸ ಕಥನದಲ್ಲಿ ಬಹಳ ವಸ್ತುನಿಷ್ಠವಾಗಿ ಕಟ್ಟಿಕೊಟ್ಟಿದ್ದಾರೆ.

ಅಮೇರಿಕೆಯಂತಹ ಮುಂದುವರಿದ ದೇಶದಲ್ಲಿ ಉನ್ನತ ಶಿಕ್ಷಣ ಪೂರೈಸಿ ಭಾರತಕ್ಕೆ ಮರಳಿ ಬಂದ ಕೃಷ್ಣಾನಂದ ಕಾಮತರು ಉದ್ಯೋಗದ ಕಾರಣವಾಗಿ ಮುಂದಿನ ಮೂರು ವರ್ಷಗಳನ್ನು ಭಾರತದ ಮರುಭೂಮಿ ರಾಜ್ಯವೆಂದೇ

ಕರೆಯಿಸಿಕೊಳ್ಳುವ ರಾಜಸ್ಥಾನದ ಪುಟ್ಟ ಹಳ್ಳಿ ಜೋಬನೇರದಲ್ಲಿ, ಆಮೇಲಿನ ಎರಡು ವರ್ಷಗಳನ್ನು ಪಶ್ಚಿಮ ಬಂಗಾಲದ ಇತಿಹಾಸ ಪ್ರಸಿದ್ಧ ಪ್ಲಾಸಿಯಲ್ಲಿ ಕಳೆದರು. ಬುಡಕಟ್ಟು ಜನಾಂಗದ ಅಧ್ಯಯನ ಅವರನ್ನು ಮಧ್ಯಪ್ರದೇಶಕ್ಕೆ ಕರೆದೊಯ್ಯಿತು. ರಾಜಸ್ಥಾನ, ಪಶ್ಚಿಮ ಬಂಗಾಲ ಮತ್ತು ಮಧ್ಯಪ್ರದೇಶ ಚಾರಿತ್ರಿಕವಾಗಿ, ಪ್ರಾದೇಶಿಕವಾಗಿ ಪ್ರಸಿದ್ಧಿ ಹೊಂದಿರುವ ರಾಜ್ಯಗಳು. ಆದರೆ ಈ ರಾಜ್ಯದ ಇತಿಹಾಸ, ಜನಜೀವನ, ಪ್ರಾಕೃತಿಕ ಲಕ್ಷಣಗಳು ಇತ್ಯಾದಿ ಕುರಿತು ಆಳವಾಗಿ ತಿಳಿದುಕೊಂಡವರು ಕಡಿಮೆ. ಚರಿತ್ರೆಯ ಪಠ್ಯವನ್ನು ಹೊರತುಪಡಿಸಿಯೂ, ದಿನನಿತ್ಯದ ಆಗುಹೋಗುಗಳನ್ನು ತಿಳಿದುಕೊಳ್ಳುವ ಮೂಲಕವೂ ಆಯಾ ಪ್ರದೇಶದ ಚರಿತ್ರೆಯನ್ನು, ಸಂಸ್ಕೃತಿಯನ್ನು ಕಟ್ಟಿಕೊಡುವುದು ಸಾಧ್ಯವಿದೆ ಎಂಬುದನ್ನು ಕೃಷ್ಣಾನಂದರು ಪ್ರವಾಸ ಕಥನದ ರೂಪದಲ್ಲಿರುವ ತಮ್ಮ ಅನುಭವ ಕಥನಗಳಲ್ಲಿ ತಿಳಿಯಪಡಿಸಿದ್ದಾರೆ.

ಆದಿವಾಸಿಗಳು ಮತ್ತು ಬುಡಕಟ್ಟು ಜನಾಂಗದವರು ಸಾಮಾನ್ಯವಾಗಿ ನಗರಪ್ರದೇಶದ ಜನರೊಂದಿಗೆ ಮುಕ್ತರೀತಿಯಿಂದ ಬೆರೆಯುವವರಲ್ಲ. ತಮ್ಮದೇ ಶೈಲಿಯ ಕಟ್ಟುಪಾಡುಗಳು, ಆಚರಣೆ ವಿಶೇಷಗಳು, ವಿಶಿಷ್ಟ ವಿಧಿವಿಧಾನಗಳ ಮೂಲಕ ಜೀವನವನ್ನು ರೂಪಿಸಿಕೊಂಡಿರುವ ಈ ಜನಾಂಗದವರೊಂದಿಗೆ ಕಾಮತರು ಎಂದಿನ ತಮ್ಮ ಹಾಸ್ಯಪ್ರಜ್ಞೆ, ಸರಳ ನಡವಳಿಕೆಯ ಮೂಲಕ ಸಲೀಸಾಗಿ ಬೆರೆತುಕೊಂಡು ಅವರ ಪರಿಪೂರ್ಣ ಬದುಕಿನ ಚಿತ್ರಣವನ್ನು ದಾಖಲಿಸಿದ್ದಾರೆ. ಅದನ್ನು ಓದಿ ತಿಳಿದುಕೊಳ್ಳುವುದೇ ಒಂದು ವಿಶಿಷ್ಟ ಅನುಭವವಾಗುತ್ತದೆ.

ಕಾಮತರು ಹೊರರಾಜ್ಯಗಳ ವ್ಯಾಪಕ ಪ್ರವಾಸ, ವಾಸ್ತವ್ಯಗಳನ್ನು ಆಧರಿಸಿ ಪ್ರಕಟಿಸಿರುವ 'ನಾನೂ ಅಮೇರಿಕೆಗೆ ಹೋಗಿದ್ದೆ' 'ಕಾಲರಂಗ', 'ವಂಗದರ್ಶನ', 'ನಾ ರಾಜಸ್ಥಾನದಲ್ಲಿ', 'ಬಸ್ತರ ಪ್ರವಾಸ', 'ಮಧ್ಯಪ್ರದೇಶದ ಮಡಿಲಲ್ಲಿ', 'ಪ್ರವಾಸಿಯ ಪ್ರಬಂಧಗಳು' ಮೊದಲಾದ ಕೃತಿಗಳನ್ನು ವಿದ್ವಾಂಸರು 'ಸಾಂಸ್ಕೃತಿಕ ಇತಿಹಾಸದ ದಾಖಲೆಗಳು' ಎಂದು, 'ಅಪರೂಪದ ಅಲೆಮಾರಿಯ ಕ್ಷೇತ್ರದರ್ಶನ'ವೆಂದು ವರ್ಣಿಸಿದ್ದಾರೆ. ಅವರ 'ನಾ ಕಂಡ ಕರ್ನಾಟಕ' ಕೃತಿಯಲ್ಲಿ ವಿಶೇಷವಾಗಿ ಚಿತ್ರಕಲೆಗೆ ಆದ್ಯತೆ ನೀಡಿ

ವಿವರಣಾತ್ಮಕವಾಗಿ ಬರೆದ ಲೇಖನಗಳು, ಇಲ್ಲಿಯ ಜನಜೀವನದ ಕುರಿತಾಗಿ ಪಾರ್ಶ್ವನೋಟ ಬೀರುವ ಲೇಖನಗಳು ಇವೆ. 'ಮರುಪ್ರಯಾಣ' ಕೃತಿಯಲ್ಲಿ ಹೊನ್ನಾವರದ ಗೇರಸೊಪ್ಪಗಳ ಇತಿಹಾಸ, ಬಸವರಾಜದುರ್ಗ, ಕರ್ನಲ್ ಹಿಲ್, ಸೆಟ್ಟಿಕೆರೆಗಳ ಇತಿಹಾಸದ ವಿವರಗಳು ದೊರೆಯುತ್ತವೆ.

## ಕಾಮತರ ಕುಂಚಪ್ರಪಂಚ

ವೃತ್ತಿ ಹಾಗೂ ಆಸಕ್ತಿಯ ಕಾರಣವಾಗಿ ದೇಶ ಸುತ್ತುವ ಕಾಯಕದಲ್ಲಿ ತೊಡಗಿಸಿಕೊಂಡಿದ್ದ ಕಾಮತರು ಕಣ್ಣು ಕಂಡದ್ದನ್ನು ದಾಖಲಿಸುವ ಹಂಬಲದಿಂದ ಛಾಯಾಗ್ರಹಣ ರೂಢಿಸಿಕೊಂಡರು. ತನ್ನ ಅನುಭವಕ್ಕೆ ಬಂದ ಹೊಸ ಹೊಸ ವಿಚಾರಗಳನ್ನು ಇತರರೊಂದಿಗೆ ಹಂಚಿಕೊಳ್ಳುವ ಉದ್ದೇಶದಿಂದ ಪತ್ರ ಬರೆವಣಿಗೆ ಪ್ರಾರಂಭಿಸಿದರು. ತನ್ನ ವೈಜ್ಞಾನಿಕ ಸಂಶೋಧನೆ, ಅಧ್ಯಯನವನ್ನು ಕಾಗದದ ಮೇಲೆ ಇಳಿಸಿದಾಗ, ಲೇಖನಗಳಿಗೆ ಪೂರಕವಾಗಿ ರೇಖಾಚಿತ್ರಗಳನ್ನು ಬರೆಯುವ ಅಭ್ಯಾಸ ಮಾಡಿಕೊಂಡರು. ಹೀಗೆ ಒಂದಕ್ಕೊಂದು ಬೆಸೆದು ನಿಂತ ಅವರ ಹವ್ಯಾಸಗಳಾದ ಛಾಯಾಗ್ರಹಣ, ಚಿತ್ರಕಲೆ, ಬರೆವಣಿಗೆ ಇತ್ಯಾದಿಗಳು ಮೂರ್ತರೂಪ ತಾಳಿದ್ದು ಅವರು ಖಾಸಗಿ ನೆಲೆಯಿಂದ ವೃತ್ತಿಯನ್ನು ಪ್ರಾರಂಭಿಸಿದ ಬಳಿಕ.

'ಫೋಟೋ ತೆಗೆಯುವುದೆಂದರೆ ಯಾಂತ್ರಿಕವಾಗಿ ಕ್ಲಿಕ್ಕಿಸುವುದು ಅಲ್ಲ. ಅದರಲ್ಲಿ ಭಾವನೆಗಳು ಪಡಿಮೂಡಬೇಕು' ಎಂದು ಹೇಳುತ್ತಿದ್ದ ಕೃಷ್ಣಾನಂದರು ಯಾವುದೇ ವೃತ್ತಿಪರ ಹಾಗೂ ಹವ್ಯಾಸೀ ಛಾಯಾಗ್ರಾಹಕರನ್ನು ಮೀರಿಸುವ ರೀತಿಯಿಂದ ಕ್ಲಿಕ್ಕಿಸಿದ ಛಾಯಾಚಿತ್ರಗಳ ಸಂಖ್ಯೆ ಲಕ್ಷವನ್ನು ಮೀರಿದೆ. ವೈಯಕ್ತಿಕ ನೆಲೆಯಲ್ಲಿ ಇದು ಜಾಗತಿಕ ದಾಖಲೆಯೂ ಆಗಿರ ಬಹುದು. ಸಂಶೋಧನಾ ಬರೆವಣಿಗೆಯಲ್ಲಿ ಚಿತ್ರ-ಲೇಖನಗಳಿಗೆ ಮೊದಲ ಆದ್ಯತೆ ಸಲ್ಲುತ್ತದೆ. ಇರುವೆ, ತಗಣೆ, ಪತಂಗ, ಕಾಗೆ, ಹೂ, ಎಲೆ, ಗಿಡ, ಮರ, ಸಿದ್ಧಿಗಳು, ಗೌಳಿಗಳು, ಕನ್ನಡದ ಪ್ರಸಿದ್ಧ ಲೇಖಕರು, ಕವಿಗಳು.. ಹೀಗೆ ಕಾಮತರ ಛಾಯಾಚಿತ್ರಗಳ ಅಂಗಳದಲ್ಲಿ ಎಲ್ಲರಿಗೂ ಸ್ವಾಗತವಿದೆ. ಇಲ್ಲಿ ಯಾರೂ ಕನಿಷ್ಠರಲ್ಲ, ಯಾರೂ ಶ್ರೇಷ್ಠರಲ್ಲ! ಅವರನ್ನು ಕಾಣುವ ದೃಷ್ಟಿ ಮಾತ್ರ ಮುಖ್ಯ.

ಚಿತ್ರಕಲಾಕಾರನಾಗಬೇಕೆಂಬ ಕನಸು ಕಟ್ಟಿದವರು ಕಾಮತ್. ವಿವಿಧ ಕಾರಣಗಳಿಂದ ಅದು ಕೈಗೂಡಲಿಲ್ಲ. ಡ್ರಾಯಿಂಗ್ ಹಾಳೆ, ಪೆನ್ಸಿಲ್, ಕುಂಚ, ಬ್ರಶ್‌ಗಳೊಂದಿಗೆ ಕಾಲ ಕಳೆಯುತ್ತಾ ತಮ್ಮ ಲೇಖನಗಳಿಗೆ ಅಗತ್ಯವೆನಿಸಿದ, ತಮಗೆ ಇಷ್ಟವಾಗುವ ರೇಖಾಚಿತ್ರಗಳನ್ನು ಅವರು ಕಾಗದದ ಮೇಲೆ ಮೂಡಿಸುತ್ತಾ ಹೋದರು. ಅವರ ಛಾಯಾಚಿತ್ರಗಳ ಹಾಗೆ ರೇಖಾಚಿತ್ರಗಳು ಕೂಡ ಬಹುಸಂಖ್ಯೆಯಲ್ಲಿವೆ. ಆದಿವಾಸಿಗಳ ಮಣ್ಣಿನ ಆಟಿಕೆಗಳು, ಭಿಲ್ಲರ ದೇವತೆಗಳು, ಆದಿಮಾನವನ ಕಲಾಮಾದರಿಗಳು, ಹಚ್ಚೆಯ ವಿನ್ಯಾಸಗಳು, ಮುರಿಯ ಮಹಿಳೆಯ ಒಡವೆಗಳು, ಶಿಲಾಯುಗದ ಬೇಟೆಯ ದೃಶ್ಯಗಳು, ಪ್ರಾಕ್ ಶಿಲಾಯುಗದ ಚಿತ್ರ, ಇರುವೆಯ ಕಾಯಕ – ಹೀಗೆ ಕಾಮತರ ಕುಂಚಪ್ರಪಂಚ ಅತ್ಯದ್ಭುತ ಚಿತ್ರಗಳಿಂದ ಕಿಕ್ಕಿರಿದು ತುಂಬಿದೆ. ಕಾಮತರ ಸ್ವಂತ ಗ್ರಂಥಗಳಲ್ಲಿ, ಇತರ ವಿದ್ವಾಂಸರ ಗ್ರಂಥಗಳಲ್ಲಿ ಸಂದರ್ಭೋಚಿತವಾಗಿ ಕಾಮತರ ರೇಖಾಚಿತ್ರಗಳು ಬಳಕೆಯಾಗಿವೆ. 'ಕಾಮತರ ಕುಂಚಪ್ರಪಂಚ'ವೆಂಬ ಪ್ರತ್ಯೇಕ ಗ್ರಂಥವೂ ಲಭ್ಯ ಇದೆ.

ತನ್ನ ಮಡದಿಯ ಸೀರೆಗಳಲ್ಲಿ, ಮನೆಯ ಪರದೆ, ದಿಂಬಿನ ಚೀಲಗಳಲ್ಲಿ ಸುಂದರ ವಿನ್ಯಾಸವನ್ನು ಮೂಡಿಸಿದವರು ಕಾಮತ್. ಅವರ ಕಲಾಪ್ರಜ್ಞೆ ಹಾಗೂ ಜೀವವಿಜ್ಞಾನದ ತಿಳಿವಳಿಕೆಯಿಂದ ಅವರ ವೈಜ್ಞಾನಿಕ ಬರೆವಣಿಗೆಯ ಗ್ರಂಥಗಳು ಸಚಿತ್ರರೂಪದಿಂದ ಗಮನ ಸೆಳೆಯುವಂತಾಗಿದೆ. ಅವರದೇ ರೇಖಾಚಿತ್ರಗಳೊಂದಿಗೆ, ಅವರೇ ಸ್ವತಃ ಕ್ಲಿಕ್ಕಿಸಿದ ಛಾಯಾಚಿತ್ರಗಳು ಮೇಳೈಸಿ ಅವರ ಜನಾಂಗೀಯ ಅಧ್ಯಯನ ಕೃತಿಗಳು ಅತ್ಯಾಕರ್ಷಕವಾಗಿ ಮೂಡಿಬಂದಿವೆ.

## ಪ್ರಬುದ್ಧ ಲೇಖಕ

ಕೃಷ್ಣಾನಂದ ಕಾಮತ್ ಮೂಲತಃ ವಿಜ್ಞಾನದ ವಿದ್ಯಾರ್ಥಿ, ಸಾಹಿತ್ಯಾಭ್ಯಾಸ ಮಾಡಿದವರಲ್ಲ. ಶಾಲಾ-ಕಾಲೇಜು ಪತ್ರಿಕೆಗಳಿಗೆ ಲೇಖ, ಕತೆ, ಕವನ ಬರೆದವರಲ್ಲ. ತಾನು ಬರಹಗಾರನಾಗಬೇಕೆಂಬ ಕನಸು ಕಂಡವರಲ್ಲ. ಆದರೂ 23 ಗ್ರಂಥಗಳನ್ನು ಪ್ರಕಟಿಸಿ, ಮೂರು ಬಾರಿ ಸಾಹಿತ್ಯ ಅಕಾಡೆಮಿ ಪ್ರಶಸ್ತಿಗೆ ಭಾಜನರಾದ ತ್ರಿಭಾಷಿಕ ಲೇಖಕರು!

ಕಾಮತರಲ್ಲಿದ್ದ ಪ್ರತಿಭೆಯನ್ನು ಮೊದಲು ಗುರುತಿಸಿದವರು ಅವರ ಪತ್ನಿ ಡಾ॥ ಜ್ಯೋತ್ಸ್ನಾ ಕಾಮತ್. ಸ್ವತಃ ಲೇಖಕಿ ಹಾಗೂ ಅಪ್ರತಿಮ ಓದುಗರಾದ ಜ್ಯೋತ್ಸ್ನಾ ಅವರು ಕೃಷ್ಣಾನಂದ ಕಾಮತರಿಗೆ ಅವರ ವಿಶಿಷ್ಟ ಅನುಭವಗಳನ್ನು, ಜೀವ ಜಗತ್ತಿನ ಕುರಿತಾದ ತಿಳಿವಳಿಕೆಯನ್ನು ಬರೆಹ ರೂಪದಲ್ಲಿ ದಾಖಲಿಸುವಂತೆ ಪ್ರೋತ್ಸಾಹ ನೀಡಿದರು. ಅವರು ಬರೆದಿರುವುದನ್ನು ತಿದ್ದಿ, ತೀಡಿ ಪ್ರಕಟಣೆಗೆ ನೀಡಿದರು. ಜ್ಯೋತ್ಸ್ನಾ ಅವರ ಈ ಅವಿರತ ಪ್ರಯತ್ನದಿಂದ ಕನ್ನಡಕ್ಕೆ ಒಬ್ಬ ಪ್ರಬುದ್ಧ ಲೇಖಕ ದೊರೆಯುವಂತಾಯಿತು. ಕನ್ನಡ ಪ್ರವಾಸ ಸಾಹಿತ್ಯ, ಪತ್ರಸಾಹಿತ್ಯ, ವಿಜ್ಞಾನ ಸಾಹಿತ್ಯಕ್ಕೆ ಅಪೂರ್ವ ಕೊಡುಗೆ ಸಂದಿತು.

ಪ್ರವಾಸವನ್ನು ಶೈಕ್ಷಣಿಕ ಅಧ್ಯಯನ ರೂಪದಲ್ಲಿ ಪರಿಭಾವಿಸಿದವರು ಕೃಷ್ಣಾನಂದ ಕಾಮತ್. ಅವರ ಪ್ರವಾಸ ಸಾಹಿತ್ಯ ಕೃತಿಗಳು ಕ್ಷೇತ್ರ ದರ್ಶನದೊಂದಿಗೆ ಆಯಾ ಪ್ರದೇಶದ ಜನಜೀವನದ ಚಾರಿತ್ರಿಕ, ಸಾಮಾಜಿಕ, ಆರ್ಥಿಕ ಹಾಗೂ ಸಾಂಸ್ಕೃತಿಕ ವಿವರಗಳನ್ನು ಒಳಗೊಂಡಿರುವುದು ಅವುಗಳ ವೈಶಿಷ್ಟ್ಯ. ಜೋಬನೇರದ ಕಡುಬಡವರು ಮದುವೆ, ಶ್ರಾದ್ಧದ ಕಾರ್ಯಕ್ರಮಗಳನ್ನು ಸಾರ್ವತ್ರಿಕವಾಗಿಸಿಕೊಂಡು ಸಮಷ್ಟಿ ಪ್ರಜ್ಞೆಯಲ್ಲಿ ಬದುಕುವ ರೀತಿ, ಬೇರೆಯವರ ಸೊತ್ತನ್ನು ದೋಚಿ ತಮ್ಮ ಕ್ಷೇಮವನ್ನು ನೋಡಿಕೊಳ್ಳುವ ಪ್ಲಾಸಿಯ ಜನರ ಸ್ವಾರ್ಥಪರತೆ, ಸಹಚರಿ ಜೀವಿಗಳ ಕುರಿತು, ಪಶುಪ್ರಾಣಿಗಳ ಕುರಿತು ಸಂಯಮದಿಂದ ನಡೆದುಕೊಳ್ಳುವ ಬಸ್ತರ್ ಆದಿವಾಸಿಗಳ ಕಾಳಜಿಗಳು, ಗೊಂಡಾರಣ್ಯದ ಗೊಂಡರ ಇರುವಿಕೆಯ ವೈಲಕ್ಷಣ್ಯಗಳು, ಅಮೇರಿಕನ್‌ರ ಸಮಯಪಾಲನೆ ಇತ್ಯಾದಿ ಕೆಲವು ಜನಾಂಗೀಯ ಒಳನೋಟಗಳನ್ನು ಸಮಾಜವಿಜ್ಞಾನಿಯ ಪರಿಪ್ರೇಕ್ಷ್ಯದಿಂದ ಕಾಮತರು ತಮ್ಮ ಪ್ರವಾಸ ಸಾಹಿತ್ಯ ಕೃತಿಗಳಲ್ಲಿ ಕಾಣಿಸಿದ್ದಾರೆ.

ದಿನಕ್ಕೊಂದು ಪತ್ರ ಬರೆಯುವ, ಆ ಪತ್ರಗಳಲ್ಲಿ ದೈನಂದಿನ ಆಗುಹೋಗುಗಳ ಜೊತೆಯಲ್ಲಿ ಕೆಲವು ನಿರ್ದಿಷ್ಟ ವಿಚಾರಗಳನ್ನು ಚರ್ಚೆಗೆ ಎತ್ತಿಕೊಂಡು ವಿವರಿಸುವ, ತಾನು ಬರೆದ ಪತ್ರಗಳನ್ನು ಸಂಗ್ರಹಿಸಿ ಪ್ರಕಟಿಸುವ ಸಾಹಸ ಮೆರೆದವರು ಕೃಷ್ಣಾನಂದ ಕಾಮತ್. ಮದುವೆಗೆ ಮೊದಲು, ಮದುವೆಯಾದ ನಂತರ ಮಡದಿಗೆ ಬರೆದ ಪತ್ರಗಳಲ್ಲಿ ಭೇಟಿ ಮಾಡಿದ

ವಿಶೇಷ ವ್ಯಕ್ತಿ, ಓದಿದ ಪುಸ್ತಕ, ಕೇಳಿದ ಸಂಗೀತ, ಬರೆದ ಲೇಖನ, ಹಣಕಾಸಿನ ವ್ಯವಸ್ಥೆಯೊಂದಿಗೆ ಬಡ ಬಂಗಾಲಿಗಳು, ಬಿಹಾರಿಗಳು ಪಡುವ ಬವಣೆಯನ್ನು ಬಹು ಹೃದಯಂಗಮವಾಗಿ ಚಿತ್ರಿಸಿದ್ದಾರೆ. ತನ್ನ ಮೇಲೆ ಹೆಚ್ಚು ಪ್ರಭಾವ ಬೀರಿದ ತಂದೆಯವರ ವ್ಯಕ್ತಿಚಿತ್ರವನ್ನು ಕಡೆದು ನಿಲ್ಲಿಸಿದ್ದಾರೆ. ಸ್ವತಃ ತಂದೆಯ ಸ್ಥಾನದಲ್ಲಿ ನಿಂತು ಮಗ ವಿಕಾಸನಿಗೆ ಬರೆದ ಪತ್ರಗಳಲ್ಲಿ ತಿಳಿವಳಿಕೆಯ ಕೆಲವು ಮಾಹಿತಿಗಳನ್ನು ನೀಡಿದ್ದಾರೆ. ಕಾಮತರ 'ಪ್ರೇಯಸಿಗೆ ಪತ್ರಗಳು' ಮತ್ತು 'ಪತ್ರ ಪರಾಚಿ' ಜನಮನ್ನಣೆ ಪಡೆದ ಗ್ರಂಥಗಳು.

'ನಮ್ಮ ಸುತ್ತಮುತ್ತಲಿನ ಪರಿಸರದಲ್ಲಿರುವ ಜೀವಿಗಳ ಕುರಿತು ತಿಳಿದುಕೊಳ್ಳಬೇಕಾದರೆ ನಮ್ಮಲ್ಲಿ ತಾಳ್ಮೆ ಬೇಕು. ತೆರೆದ ಕಣ್ಣು, ಬಿಚ್ಚು ಮನಸ್ಸು ಮತ್ತು ಪರಿಸರದಲ್ಲಿ ಆಸಕ್ತಿ ಇವಿಷ್ಟೇ ಇದ್ದರೆ ಸಾಕು' ಎನ್ನುವ ಕಾಮತರು ಜನಸಾಮಾನ್ಯರಲ್ಲಿ ವಿಜ್ಞಾನ ವಿಷಯಗಳಿಗೆ ಸಂಬಂಧಿಸಿದಂತೆ ಆಸಕ್ತಿ ಮೂಡುವ ಉದ್ದೇಶದಿಂದ ಸರಳ ಭಾಷೆ, ನೇರ ನಿರೂಪಣೆ, ಹಾಗೂ ನಿಖರ ಮಾಹಿತಿಗಳನ್ನು ಒಳಗೊಂಡಿರುವ ಹಲವು ಶಾಸ್ತ್ರಗ್ರಂಥಗಳನ್ನು ಬರೆದು ಪ್ರಕಟಿಸಿದ್ದಾರೆ. ಇವು ಜೀವಜಗತ್ತಿನ ಕುರಿತಾದ ಗ್ರಂಥಗಳು. ಈ ಗ್ರಂಥಗಳ ಓದು ಅತ್ಯದ್ಭುತ ಲೋಕವನ್ನು ಅನಾವರಣಗೊಳಿಸುತ್ತದೆ.

ಸ್ವತಃ ಚಿತ್ರಕಲಾವಿದರಾಗಿದ್ದ ಕೃಷ್ಣಾನಂದ ಕಾಮತರು ಕರ್ನಾಟಕದಲ್ಲಿ ಚಿತ್ರಕಲೆ ಬೆಳೆದು ಬಂದ ಇತಿಹಾಸವನ್ನು ಬೆನ್ನಟ್ಟಿ ಹೋಗಿ ಲೇಪಾಕ್ಷಿಯ ಭಿತ್ತಿಚಿತ್ರಗಳು, ತಾಳೆಗರಿಯಲ್ಲಿನ ಚಿತ್ರಗಳು, ಕರಾವಳಿಯ ಕಾವಿ ಚಿತ್ರಗಳು, ಕರ್ನಾಟಕದ ಚಿಕಣಿ ಚಿತ್ರಗಳು, ಸೀಬಿಯ ಭಿತ್ತಿ ಚಿತ್ರಗಳೊಂದಿಗೆ ಬುಡಕಟ್ಟು ಜನಾಂಗದ ಹಚ್ಚೆ ವಿನ್ಯಾಸಗಳು, ಜೊತೆಗೆ ಇವುಗಳೆಲ್ಲದರ ಹಿನ್ನೆಲೆ, ಪ್ರಾಮುಖ್ಯತೆಯನ್ನು ಲೇಖನಗಳ ಮೂಲಕ, ಗ್ರಂಥ ರಚನೆಯ ಮೂಲಕ ಮುನ್ನೆಲೆಗೆ ತಂದರು. ಜನಮಾನಸದಿಂದ ದೂರ ಸರಿದು, ಇಂದು ಹಳೆಯ ಮನೆಗಳಲ್ಲಿ, ದೇವಾಲಯಗಳಲ್ಲಿ ಮಾತ್ರ ಕಂಡು ಬರುವ ಕಾವಿಕಲೆಯ ಕುರಿತು ಸಮಗ್ರ ಮಾಹಿತಿಯನ್ನು ಕನ್ನಡ ಮತ್ತು ಕೊಂಕಣಿ ಎರಡೂ ಭಾಷೆಗಳಲ್ಲಿ ಗ್ರಂಥ ರೂಪದಲ್ಲಿ ಪ್ರಕಟಿಸಿ ಕರ್ನಾಟಕದ ಕರಾವಳಿಯ ಈ ವಿಶಿಷ್ಟ ಚಿತ್ರಕಲೆಗೆ ಭದ್ರ ಸ್ಥಾನ ಕಲ್ಪಿಸಿಕೊಟ್ಟವರು ಕಾಮತರು.

ಅವರ ಮಾತೃಭಾಷೆ ಕೊಂಕಣಿ. ಕೊಂಕಣಿ ಭಾಷೆ ಮತ್ತು ಸಮುದಾಯದ ಕುರಿತು ಸಹಜವಾದ ಪ್ರೀತಿ ಹಾಗೂ ಕಾಳಜಿ ಹೊಂದಿದ್ದ ಅವರು ಕೊಂಕಣಿ ಭಾಷಿಕ ಸಮುದಾಯದ ಕುರಿತು 'ಅಕ್ಷತ' ಕೃತಿಯನ್ನು ರಚಿಸಿದ್ದಾರೆ. ಇದರಲ್ಲಿ ಉತ್ತರ ಕನ್ನಡದ ಗೌಳಿಗಳು, ಮಾಪಿಳ್ಳೆಯರು, ಹಾಲಕ್ಕಿಗೌಡರು, ಸಾರಸ್ವತರು, ಖಾರ್ವಿಯರು, ಸಿದ್ದಿ, ನವಾಯತರು ಹಾಗೂ ಕ್ರೈಸ್ತರ ರೀತಿ ರಿವಾಜುಗಳ ವಿವರಗಳಿವೆ.

ಸೃಜನಶೀಲ ಪ್ರಕಾರಗಳಲ್ಲಿ ಕಾಮತರು 'ನನ್ನ ನಲ್ಲೆ' ಎಂಬ ಕವನವನ್ನು, 'ಇರುವೆಯ ಮದುವೆ' ಎಂಬ ಬಾನುಲಿ ರೂಪಕವನ್ನು ಹಾಗೂ 'ಭಗ್ನ ಸ್ವಪ್ನ'ವೆಂಬ ಇಡೀ ಕಾದಂಬರಿಯೊಂದನ್ನು ಬೆಳಕಿಗೆ ತಂದಿದ್ದಾರೆ.

ಕೃಷ್ಣಾನಂದ ಕಾಮತರ ಸಾಹಿತ್ಯದಲ್ಲಿ ಓರ್ವ ಪ್ರಬುದ್ಧ ಸಾಹಿತಿ, ಜೀವಪರ ವಿಜ್ಞಾನಿ ಹಾಗೂ ಪರಿಸರ ಪ್ರೇಮಿಯ ವಿದ್ವತ್ತು ಹಾಗೂ ಕಾಳಜಿಗಳು ಎದ್ದು ಕಾಣುತ್ತವೆ.

## ಪರಿಸರವಾದಿ

ನಿಸರ್ಗ ಸುಲಭದಲ್ಲಿ ಸೋಲೊಪ್ಪಿಕೊಳ್ಳುವುದಿಲ್ಲ. ಈ ಗಟ್ಟಿತನ ಇಲ್ಲದಿದ್ದರೆ ಇಂದು ಜಗತ್ತಿನಲ್ಲಿ ಜೀವಿಗಳೇ ಇರುತ್ತಿರಲಿಲ್ಲ ಎಂದು ಹೇಳುವ ಕೃಷ್ಣಾನಂದ ಕಾಮತರು 'ಮನುಷ್ಯ ತನ್ನ ದೈನಂದಿನ ಅವಶ್ಯಕತೆಗಳಿಗಾಗಿ ಪರಿಸರದಲ್ಲಿರುವ ಸಂಪನ್ಮೂಲಗಳನ್ನು ನಿಯಮಿತವಾಗಿ ಬಳಸುತ್ತಾನೆ. ಆದರೆ ಈ ಸಂಪನ್ಮೂಲಗಳ ಬಳಕೆ ಮಿತಿ ಮೀರಿದಾಗ, ನೆಲ, ಜಲದ ಕೊರತೆ, ಪರಿಸರ ನಾಶ ಇತ್ಯಾದಿ ಸಂಭವಿಸಿ ಮನುಷ್ಯನ ಸಹಜೀವಿಗಳಾಗಿ ಈ ಭೂಮಿಯ ಮೇಲೆ ಹುಟ್ಟಿ ಬಂದಿರುವ ಕೋಟಿ ಕೋಟಿ ಪ್ರಾಣಿಗಳು, ಪಕ್ಷಿಗಳು, ಗಿಡ, ಮರಗಳು ಅಪಾರ ಕಷ್ಟನಷ್ಟಗಳನ್ನು ಅನುಭವಿಸುವ ಪರಿಸ್ಥಿತಿ ಉಂಟಾಗುತ್ತದೆ. ಈ ಭೂಮಿಯ ಮೇಲೆ ಬದುಕುವ ಹಕ್ಕು ಮನುಷ್ಯರಿಗಷ್ಟೇ ಅಲ್ಲ ಪ್ರತಿಯೊಬ್ಬ ಜೀವಿಗೂ ಇದೆ. ಏಕಾಣು ಬ್ಯಾಕ್ಟೀರಿಯಾದಿಂದ ಹಿಡಿದು ಬೃಹತ್ ಆನೆಯವರೆಗೆ, ಹಾವಸೆಯಿಂದ ಹಿಡಿದು ಆಲದಮರದವರೆಗೆ ಪ್ರತಿಯೊಂದು ಜೀವಿಗೂ ಹುಟ್ಟು, ಸಾವನ್ನು ಒಳಗೊಂಡಿರುವ ಜೀವನ

ಚಕ್ರವಿರುತ್ತದೆ. ಜಗತ್ತಿನ ಎಲ್ಲಾ ಜೀವಿಗಳು, ಮನುಷ್ಯನನ್ನೂ ಒಳಗೊಂಡಂತೆ ಸಮನ್ವಯದ ಬಾಳ್ವೆ ನಡೆಸಿದರೆ ಮಾತ್ರ ಪರಿಸರದ ಸಮತೋಲನವನ್ನು ಕಾಪಾಡಿಕೊಂಡು ಬರುವುದು ಸಾಧ್ಯವಿದೆ' ಎನ್ನುವ ಕಿವಿಮಾತನ್ನು ಹೇಳಿದ್ದಾರೆ.

ನಮ್ಮ ಹಿರಿಯರು ತಾವು ಬದುಕುವ ಪರಿಸರದ ಕುರಿತು ಕಾಳಜಿ, ಗೌರವವನ್ನು ಇಟ್ಟುಕೊಂಡಿದ್ದರು. ಭವಿಷ್ಯವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಪರಿಸರವನ್ನು ಉಳಿಸಿ ಬೆಳೆಸುವ ಕಾರ್ಯವನ್ನು ನಡೆಸುತ್ತಿದ್ದರು. ಅವರು ಆಚರಿಸುತ್ತಿದ್ದ 'ವೃಕ್ಷನೋಂಪಿ'ಯ ಕುರಿತು ತಮ್ಮ 'ಸಸ್ಯ ಪರಿಸರ' ಕೃತಿಯಲ್ಲಿ ವಿವರಿಸುತ್ತಾ ಅವರು ಹೇಳುತ್ತಾರೆ, '..ಜನವಸತಿ ಅತೀ ಕಡಿಮೆ ಇದ್ದು ಸಸ್ಯಗಳನ್ನು ಸಂರಕ್ಷಿಸಿ ಎನ್ನುವ ಪ್ರಮೇಯ ಇರದಿದ್ದರೂ ನಮ್ಮವರು ಸಸ್ಯಗಳನ್ನು ಮಕ್ಕಳಂತೆ ಲಾಲನೆ ಪಾಲನೆ ಮಾಡಿ ಬೆಳೆಸಿದರು. ಹಳ್ಳಿಗೊಂದು ತೋಪು, ಊರಿಗೊಂದು ಕಾಡು, ರಾಜ್ಯಕ್ಕೊಂದು ಅರಣ್ಯ ಅಂದಿನ ದಿವ್ಯಮಂತ್ರವಾಗಿತ್ತು. ಗಿಡ, ಮರಗಳನ್ನು ಬೆಳೆಸಿ ಲೋಕಕಲ್ಯಾಣಕ್ಕಾಗಿ ಮೀಸಲಿಡುತ್ತಿದ್ದರು. ಹೀಗೆ ಧರ್ಮಕಾರ್ಯವೆಂದು ಗಿಡ, ಬಳ್ಳಿಗಳನ್ನು ನೆಟ್ಟು ಬೆಳೆಸಿ ಜನಹಿತಕ್ಕಾಗಿ ಮೀಸಲಿಡುವುದು 'ವೃಕ್ಷನೋಂಪಿ' ಎಂದು ಮನ್ನಣೆ ಪಡೆದಿತ್ತು. ಕ್ರಿಮಿಕೀಟಗಳು ಗಿಡಮರಗಳನ್ನು ಆಹುತಿ ತೆಗೆದುಕೊಂಡಾಗ ಅದರ ಸಂರಕ್ಷಣೆಗಾಗಿ ಮುಂಜಾಗ್ರತಾ ಕ್ರಮವನ್ನು ಅವರು ಕೈಗೊಳ್ಳುತ್ತಿದ್ದರು. ಕೆರೆ, ಬಾವಿಗಳನ್ನು ತೋಡಿಸುವುದು, ಅರವಟ್ಟಿಗೆಗಳನ್ನು ನಿಲ್ಲಿಸುವುದು, ಗಿಡಮರಗಳನ್ನು ನೆಡುವುದು ಪುಣ್ಯದ ಕೆಲಸವೆಂದು ತಿಳಿಯಲಾಗುತ್ತಿತ್ತು. ರಸ್ತೆಬದಿ ಸಾಲುಮರಗಳನ್ನು ಬೆಳೆಸುವುದು ಆಡಳಿತಗಾರರ ಹೊಣೆಯಾಗಿದ್ದರೂ, ಸಾರ್ವಜನಿಕರೂ ಈ ಚಟುವಟಿಕೆಯಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದರು. ಫಲ ಪುಷ್ಪಭರಿತ ಮರಗಳನ್ನು ಕಡಿಯುವುದು ಪಾಪವೆಂದು ತಿಳಿಯಲಾಗುತ್ತಿತ್ತು. ಹಣ್ಣಿನ ಆಸೆಯಿಂದ ಮರವನ್ನು ಕಡಿಯುವವನನ್ನು ಅಧಮನೆಂದು ಪರಿಗಣಿಸಲಾಗುತ್ತಿತ್ತು.'

ಆದರೆ ಮನುಷ್ಯನಲ್ಲಿ ಸ್ವಾರ್ಥ, ಸುಖದ ಲೋಲುಪತೆ ಬೆಳೆದ ಹಾಗೆ ಪರಿಸರದ ಬಳಕೆ ಮಿತಿಮೀರಿ ನೈಸರ್ಗಿಕ ಸಂಪನ್ಮೂಲಗಳು ನಾಶವಾಗತೊಡಗಿದವು. ನಮ್ಮ ಇಂದಿನ ಹಲವಾರು ಸಮಸ್ಯೆಗಳಿಗೆ

ಅರಣ್ಯನಾಶ, ವಾಯುಮಾಲಿನ್ಯಗಳು ಹೇಗೆ ಕಾರಣವಾಗಿವೆ ಎಂಬುದನ್ನು ಅವರು ಬಯಲಿಗೆಳೆದಿದ್ದಾರೆ. ಪರಿಸರ ನಾಶದಿಂದ ಉಂಟಾಗಿರುವ ಅಧ್ವಾನಗಳಿಂದ ರಕ್ಷಿಸಿಕೊಳ್ಳಲು ಪರಿಸರ ಕಾಳಜಿಯನ್ನು ಬೆಳೆಸಿಕೊಳ್ಳುವುದು ಮುಖ್ಯವೆನ್ನುತ್ತಾರೆ ಕೃಷ್ಣಾನಂದ ಕಾಮತ್.

## ಅಂತಿಮ ನಮನ

ಡಾ॥ ಕೃಷ್ಣಾನಂದ ಕಾಮತರ ಬದುಕು, ಅವರ ವಿವಿಧ ಕ್ಷೇತ್ರಗಳ ಚಟುವಟಿಕೆಗಳು, ಪ್ರಕಟಿಸಿದ ಹಲವು ಗ್ರಂಥಗಳು ಅವರ ಜೀವನ ಶ್ರದ್ಧೆಯನ್ನು ಮತ್ತು ಮನುಕುಲದ ಕುರಿತಾದ ಕಾಳಜಿಯನ್ನು ಸೂಚಿಸುತ್ತವೆ. ಹುಟ್ಟಿನಿಂದ ಸಾವಿನವರೆಗೆ ಪ್ರಕೃತಿಯೊಂದಿಗೆ ಸ್ಪಂದಿಸುತ್ತಾ, ಅದರ ಲಾಭವನ್ನು ಪಡೆಯುತ್ತಾ ಬದುಕುವ ಮನುಷ್ಯ ಪ್ರಕೃತಿಯ ಮೂಲ ಸ್ವರೂಪ, ಅಲ್ಲಿನ ಆಗುಹೋಗುಗಳ ಕುರಿತು ಕನಿಷ್ಠ ತಿಳಿವಳಿಕೆಯನ್ನಾದರೂ ಹೊಂದಿರಬೇಕು ಎನ್ನುವುದು ಅವರ ಬರೆವಣಿಗೆಯ ಉದ್ದೇಶ ಹಾಗೂ ಆಶಯ.

ಕನ್ನಡದಲ್ಲಿ ಸರಳ ವೈಜ್ಞಾನಿಕ ಬರೆವಣಿಗೆಗೆ ರಾಜಮಾರ್ಗವನ್ನು ಕಲ್ಪಿಸಿಕೊಟ್ಟವರು ಕಾಮತರು. ಅವರ ಬರೆವಣಿಗೆ, ಛಾಯಾಚಿತ್ರಗಳು, ರೇಖಾಚಿತ್ರಗಳು ದೇಶ, ವಿದೇಶಗಳಿಗೆ ತಲುಪಲು ಕಾರಣವಾದುದು ಕಾಮತ್ ಅಂತರಜಾಲ ತಾಣ. ಈ ಅಂತರಜಾಲ ತಾಣವನ್ನು 1997ರಲ್ಲಿ ಪ್ರಾರಂಭಿಸಿದವರು ಅವರ ಮಗ ವಿಕಾಸ ಕಾಮತ್. ಕೃಷ್ಣಾನಂದ ಕಾಮತರು ಬದುಕಿದ್ದಾಗ ಈ ತಾಣದಲ್ಲಿ ನಿಯಮಿತವಾಗಿ ಲೇಖನಗಳನ್ನು, ಛಾಯಾಚಿತ್ರಗಳನ್ನು ಪ್ರಕಟಿಸುತ್ತಿದ್ದರು. ಇಂದು ಆ ಕಾರ್ಯವನ್ನು ಅವರ ಪತ್ನಿ, ಮಗ ಹಾಗೂ ಸೊಸೆ ಮುಂದುವರಿಸುತ್ತಿದ್ದಾರೆ. ಈ ತಾಣದ ಮೂಲಕ ಕೃಷ್ಣಾನಂದ ಕಾಮತರು ಮಾತ್ರವಲ್ಲ ಕರ್ನಾಟಕದ ಪ್ರಸಿದ್ಧ ವ್ಯಕ್ತಿಗಳು, ಕಲಾಪ್ರಕಾರಗಳು, ನೈಸರ್ಗಿಕ ಸಂಪತ್ತು, ಚಾರಿತ್ರಿಕ ಮಹತ್ವವಿರುವ ತಾಣಗಳ ವಿವರಗಳು ಜಗತ್ತಿನಾದ್ಯಂತ ಪ್ರಸಾರ ಕಂಡಿವೆ.

ಕೃಷ್ಣಾನಂದರಿಗೆ ತನ್ನ ಹುಟ್ಟುಸ್ಥಳ ಹೊನ್ನಾವರದಲ್ಲಿ ಜೀವನದ ಸಂಧ್ಯಾಕಾಲವನ್ನು ಕಳೆಯಬೇಕೆನ್ನುವ ಅಪೇಕ್ಷೆ ಇತ್ತು, ಆದರೆ ಅದು ಸಾಕಾರವಾಗಲಿಲ್ಲ.

ಕಾಲನ ಕರೆಗೆ ಓಗೊಟ್ಟು ಅವರು ಫೆಬ್ರವರಿ 20, 2002ರಲ್ಲಿ ನಿಧನ ಹೊಂದಿದರು. ಅವರು ಭೌತಿಕವಾಗಿ ದೂರವಾದರೂ ಅವರ ಕೃತಿಗಳು, ಅವರು ಸಂಗ್ರಹಿಸಿದ ಪುಸ್ತಕಗಳು, ಅವರು ಸೆರೆ ಹಿಡಿದ ಭಾವಚಿತ್ರಗಳು ಹೊನ್ನಾವರದ ಕಾಮತ ಕುಟೀರದಲ್ಲಿ ಶಾಶ್ವತವಾಗಿ ಉಳಿದಿವೆ. ಗ್ರಂಥಾಲಯ, ಸಭಾಭವನವನ್ನೊಳಗೊಂಡಿರುವ ಕಾಮತ ಕುಟೀರದ ಪರಿಕಲ್ಪನೆ ಮತ್ತು ಕಾರ್ಯನಿರ್ವಹಣೆ ಕಾಮತರ ಪತ್ನಿ ಜ್ಯೋತ್ಸ್ನಾ ಕಾಮತ್ ಅವರದು.

ಡಾ॥ ಕೃಷ್ಣಾನಂದ ಕಾಮತರು ರೂಢಿಸಿಕೊಂಡಿದ್ದ ಹಲವಾರು ಕಲಾ ಪ್ರಕಾರಗಳಿಗೆ ಸಂಘಟಿತ ರೂಪವನ್ನು ನೀಡಿ ಅವುಗಳನ್ನು ಒಂದೆಡೆ ಕಾಯ್ದಿರಿಸುವ ಪ್ರಯತ್ನದ ಫಲವಾಗಿ 2003ರಲ್ಲಿ ಕಾಮತರ ಹುಟ್ಟೂರಾದ ಹೊನ್ನಾವರದಲ್ಲಿ ಸ್ಥಾಪನೆಯಾಗಿರುವುದು 'ಕೃಷ್ಣಾನಂದ ಕಾಮತ ಪ್ರತಿಷ್ಠಾನ'. ಕಾಮತರ ಜೀವನದ ಆಸಕ್ತಿಗಳಿಗೆ ಹತ್ತಿರವಾಗಿರುವ ವಿಚಾರಗಳಿಗೆ ಮೂರ್ತರೂಪವನ್ನು ನೀಡುವ ಉದ್ದೇಶ ಈ ಸಂಸ್ಥೆಯದು. ಕಾಮತರ ಬರಹಗಳ ಪ್ರಕಟಣೆ, ಕಿರಿಯರಿಗೆ ಪ್ರವಾಸ, ಚಾರಣ, ಫೋಟೋಗ್ರಾಫಿಯಲ್ಲಿ ತರಬೇತಿ, ಕಾಮತರು ತೆಗೆದ, ರಚಿಸಿದ ಚಿತ್ರಗಳ ಪ್ರದರ್ಶನ, ಅವರ ಹೆಸರಿನ ಸಮುದಾಯ ಭವನ, ಉಚಿತ ವಾಚನಾಲಯದ ನಿರ್ಮಾಣ – ಹೀಗೆ ಹಲವು ಚಟುವಟಿಕೆಗಳನ್ನು ಪ್ರತಿಷ್ಠಾನ ನಡೆಸುತ್ತಾ ಬಂದಿದೆ. ಕಾಮತರ ಸ್ಮರಣಗ್ರಂಥ 'ಕಮ್ಮಟಿಗ' ಪ್ರತಿಷ್ಠಾನದ ಮೊದಲ ಪ್ರಕಟಣೆ.

'ಕೃಷ್ಣಾನಂದರು ಒಂದು ಬಗೆಯ ಸಿದ್ಧರು. ಅವಧೂತರು. ಅವರು ಪ್ರತ್ಯಕ್ಷ ಸಾಧಿಸುವುದರಲ್ಲಿ ಆಸಕ್ತರಲ್ಲ. ಆದರೆ ಕ್ಷಣಕ್ಷಣಕ್ಕೆ ತಪ್ಪಿ ಜೋಲಿ ಹೊಡೆವ ಸಮಾಜದ ಕೇಂದ್ರವನ್ನು ಸಮತೋಲದಲ್ಲಿ ಹಿಡಿದು ನಿಲ್ಲಿಸಬಲ್ಲ ಸಮಾಜ ಸಿದ್ಧರು.' ಇದು ಕನ್ನಡದ ಪ್ರಮುಖ ಚಿಂತಕರಾದ ಶ್ರೀ ಕೆ. ವಿ. ಸುಬ್ಬಣ್ಣನವರು ಕೃಷ್ಣಾನಂದ ಕಾಮತರಿಗೆ ಸಲ್ಲಿಸಿದ ನುಡಿನಮನ.

# ಅನುಬಂಧ

## ಡಾ॥ ಕೃಷ್ಣಾನಂದ ಕಾಮತರ ಬದುಕಿನ ಪ್ರಮುಖ ಘಟ್ಟಗಳು

| | |
|---|---|
| ಹುಟ್ಟಿದ ದಿನ | : 29-09-1934 |
| ಹುಟ್ಟಿದ ಊರು | : ಹೊನ್ನಾವರ, ಉ.ಕ. ಜಿಲ್ಲೆ, ಕರ್ನಾಟಕ ರಾಜ್ಯ |
| ತಂದೆ ಮತ್ತು ತಾಯಿ | : ಲಕ್ಷ್ಮಣ ವಾಸುದೇವ ಕಾಮತ ಮತ್ತು ರಮಾಬಾಯಿ |
| ಶಿಕ್ಷಣ | : ಬಿ.ಎಸ್‌ಸಿ., ಬಿ.ಎಡ್., ಎಮ್.ಎಸ್‌ಸಿ., ಪಿಹೆಚ್.ಡಿ. (ಸಾಯರೆಕ್ಯೂಸ್ ವಿಶ್ವವಿದ್ಯಾಲಯ, ನ್ಯೂಯಾರ್ಕ್) |
| ವೃತ್ತಿ | : – ಸಂಶೋಧನಾ ಅಧಿಕಾರಿ (ಕೀಟಶಾಸ್ತ್ರ) ಮತ್ತು ಶಿಕ್ಷಕರು ಜೋಬನೇರ ಕೃಷಿ ಮಹಾ ವಿದ್ಯಾಲಯ, ಉದಯಪುರ ವಿಶ್ವವಿದ್ಯಾಲಯ (1965-68)<br>– ಸಂಶೋಧನಾಧಿಕಾರಿ (ಕೀಟಶಾಸ್ತ್ರ), ಕೇಂದ್ರ ಮುಖ್ಯಸ್ಥ ಕಾಮನ್ ವೆಲ್ತ್ ಇನ್ಸ್‌ಟಿಟ್ಯೂಟ್ ಆಫ್ ಬಯಾಲಾಜಿಕಲ್ ಕಂಟ್ರೋಲ್, ಪ.ಬಂಗಾಲ (1968-1970)<br>– ವೈಜ್ಞಾನಿಕ ಛಾಯಾಚಿತ್ರಗ್ರಾಹಕ, ಮಲ್ಲೇಶ್ವರಂ, ಬೆಂಗಳೂರು (1971-2000) |
| ವಿವಾಹ | : 1966 |
| ಪತ್ನಿ ಮತ್ತು ಮಗ | : ಡಾ॥ ಜ್ಯೋತ್ಸ್ನಾ ಕಾಮತ್ ಮತ್ತು<br>ಡಾ॥ ವಿಕಾಸ ಕಾಮತ್ |
| ಮೊದಲ ಗ್ರಂಥ | : 'ನಾನೂ ಅಮೇರಿಕೆಗೆ ಹೋಗಿದ್ದೆ' (1969) |
| ಒಟ್ಟು ಕೃತಿಗಳು | : 23 |
| ವೆಬ್ ಸೈಟ್ | : www.kamath.com 1997ರಲ್ಲಿ ಪ್ರಾರಂಭ |
| ನಿಧನ | : 20-02-2002 |

## ಪ್ರಮುಖ ಪ್ರಶಸ್ತಿ, ಗೌರವಗಳು

1. ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (3)
   1. ನಾನೂ ಅಮೇರಿಕೆಗೆ ಹೋಗಿದ್ದೆ (1969) 2. ಪ್ರಾಣಿ ಪರಿಸರ (1975) 3. ಬಸ್ತರ ಪ್ರವಾಸ (1991)

2. ಶ್ರೀ ಗೌರೀಶ ಕಾಯ್ಕಿಣಿ ಪ್ರತಿಷ್ಠಾನದ ಪ್ರಶಸ್ತಿ – ವಿಜ್ಞಾನ ಮತ್ತು ಪ್ರವಾಸ ಸಾಹಿತ್ಯ ಸೇವೆಗಾಗಿ – 1995
3. ಸಹಸ್ರಮಾನದ ಕೊಂಕಣಿ ಸಮ್ಮೇಳನ, ಶಿಕಾಗೋ – ಕೊಂಕಣಿ ಸಾಹಿತ್ಯ–ಕಲೆಗಳಿಗೆ ವೆಬ್‌ಸೈಟ್ ಮೂಲಕ ನೀಡಿದ ಸೇವೆಗಾಗಿ – ವಿಶೇಷ ಪ್ರಶಸ್ತಿ, 2000
4. ಮಣಿಪಾಲದ ಟಿ.ಎಮ್.ಎ. ಪೈ ಪ್ರತಿಷ್ಠಾನದ ವಿಶೇಷ ಬಹುಮಾನ: ಕಾವಿಕಲೆ (ಕೊಂಕಣಿ ಭಾಷೆ) ಕೃತಿಗೆ
5. ಮಧ್ಯಪ್ರದೇಶದ ಆದಿವಾಸಿ ಜನಾಂಗದ ಅಧ್ಯಯನಕ್ಕಾಗಿ – ಕರ್ನಾಟಕ ಸಾಹಿತ್ಯ ಅಕಾಡೆಮಿ ಫೆಲೋಶಿಪ್
6. ಉತ್ತರ ಕನ್ನಡ ಜಿಲ್ಲಾ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷಸ್ಥಾನ, ಏಪ್ರಿಲ್ 22–24, 1997

## ಡಾ॥ ಕೃಷ್ಣಾನಂದ ಕಾಮತರ ಕೃತಿಗಳು

1. ನಾನೂ ಅಮೇರಿಕೆಗೆ ಹೋಗಿದ್ದೆ (ಪ್ರವಾಸ ಕಥನ) – 1969
2. ಭಗ್ನಸ್ವಪ್ನ (ಕಾದಂಬರಿ) – 1971
3. ವಂಗ ದರ್ಶನ (ಪ್ರವಾಸಾನುಭವ) – 1972
4. ನಾ ರಾಜಸ್ಥಾನದಲ್ಲಿ (ಪ್ರದೇಶ ಪರಿಚಯ)– 1974
5. ಪ್ರಾಣಿ ಪರಿಸರ (ಪರಿಸರ ಚಿತ್ರಣ) – 1975
6. ಕಾಲರಂಗ (ಪ್ರವಾಸ ಕಥನ) – 1982
7. ಪಶು ಪಕ್ಷಿ ಪ್ರಪಂಚ (ಪ್ರಾಣಿ ವಿಜ್ಞಾನ) – 1990
8. ಪ್ರೇಯಸಿಗೆ ಪತ್ರಗಳು (ಪತ್ರಗಳು) – 1990
9. ಬಸ್ತರ ಪ್ರವಾಸ (ಗಿರಿಜನ ಪರಿಚಯ) – 1991
10. ಕೀಟಜಗತ್ತು (ಕೀಟ ವಿಜ್ಞಾನ) – 1992
11. ಸಸ್ಯ ಪ್ರಪಂಚ (ಸಸ್ಯ ಲೋಕ) – 1992
12. ಕಾವಿಕಲೆ (ಕಲೆ)– 1993
13. ಮಧ್ಯಪ್ರದೇಶದ ಮಡಿಲಲ್ಲಿ (ಪ್ರವಾಸ ಕಥನ) – 1993
14. ಸಸ್ಯ ಪರಿಸರ (ಸಸ್ಯಲೋಕದ ಕೊಡುಗೆ) – 1994

15. ಅಕ್ಷತ (ಜನಾಂಗೀಯ ಅಧ್ಯಯನ) – 1999
16. ಇರುವೆಯ ಇರವು (ಕೀಟ ವಿಸ್ಮಯ) – 1999
17. ಪ್ರವಾಸಿಯ ಪ್ರಬಂಧಗಳು – 2000
18. ಕಾಗೆಯ ಕಾಯಕ (ಕಾಕಲೋಕ ಪರಿಚಯ) – 2000
19. ಮರುಪಯಣ (ಪರಿಸರ ದುರಂತ) – 2001
20. ಸರ್ಪ ಸಂಕುಲ (ಉರಗವರ್ಗ ಪರಿಚಯ) – 2002
21. ಪತ್ರ ಪರಾಚಿ (ಪುತ್ರನಿಗೆ ಪತ್ರಗಳು) – 2004
22. ನಾ ಕಂಡ ಕರ್ನಾಟಕ – 2008.

## ಕೊಂಕಣಿ ಭಾಷೆಯ ಕೃತಿ

1. ಕೊಂಕಣ್ಯಾಲಿ ಕಾವಿಕಲಾ (ಕನ್ನಡ ಲಿಪಿ) – 2000
2. ಕೊಂಕಣ್ಯಾಲಿ ಕಾವಿಕಲಾ (ನಾಗರಿ ಲಿಪಿ) – 2007.

## ಹೆಚ್ಚುವರಿ ಓದಿಗೆ

1. ಹಿಂಗಿದ್ರು ನಮ್ ಕಮ್ತಿ (ಕಾಮತರ ಕುರಿತು ಬರಹಗಳು) – 2004
2. ಕಮ್ಮಟಿಗ (ಸಂಸ್ಮರಣ ಗ್ರಂಥ) – 2004
3. ಕಾಮತರ ಕುಂಚ ಪ್ರಪಂಚ – 2012
4. ಪರಿಸರ ಪರ್ಯಟನ – 2011.

## ಆಧಾರ ಗ್ರಂಥಗಳು

1. ಕೃಷ್ಣಾನಂದ ಕಾಮತರ ಎಲ್ಲ ಗ್ರಂಥಗಳು
2. ಹಿಂಗಿದ್ರು ನಮ್ ಕಮ್ತಿ (ಕಾಮತರ ಕುರಿತು ಬರಹಗಳು)
3. ಕಮ್ಮಟಿಗ (ಸಂಸ್ಮರಣ ಗ್ರಂಥ)
4. ಕಾಮತರ ಕುಂಚ ಪ್ರಪಂಚ.

## ವಿಶೇಷ ಕೃತಜ್ಞತೆಗಳು

ಡಾ॥ ಜ್ಯೋತ್ಸ್ನಾ ಕಾಮತ್ ಅವರಿಗೆ (ಡಾ॥ ಕೃಷ್ಣಾನಂದ ಕಾಮತರ ಸಮಗ್ರ ಕೃತಿಗಳನ್ನು ಹಾಗೂ ಅವರ ಕುರಿತ ಹೆಚ್ಚಿನ ಮಾಹಿತಿ ನೀಡಿರುವುದಕ್ಕಾಗಿ).

## ಛಾಯಾಚಿತ್ರ ಕಲಾವಿದ, ಪ್ರಬುದ್ಧ ಲೇಖಕ ಡಾ॥ ಕೃಷ್ಣಾನಂದ ಕಾಮತ್

ಅಮೆರಿಕದಲ್ಲಿ ಪಿಎಚ್ ಡಿ ಮಾಡಿ, ಅಮೆರಿಕದ 35 ರಾಜ್ಯಗಳಲ್ಲಿ ಓಡಾಡಿ, 22 ರಾಜ್ಯಗಳ ಅರಣ್ಯವನ್ನು ಅಧ್ಯಯನ ಮಾಡಿದ್ದ ವಿಜ್ಞಾನಿ, ಅಮೆರಿಕ ಸರ್ಕಾರ ನೀಡಿದ ಕೆಲಸವನ್ನು ತಿರಸ್ಕರಿಸಿ ಭಾರತಕ್ಕೆ ಬಂದ ಯುವ ವಿಜ್ಞಾನಿಯನ್ನು ಜನರು ಹಾಸ್ಯ ಮಾಡಿದರು. ಆಗ ಆ ಯುವ ವಿಜ್ಞಾನಿಯು 'ಹೊಟ್ಟೆ ಹೊರೆಯುವುದಕ್ಕಾಗಿ ಶಿಕ್ಷಣ ಎಂದು ಹೇಳುವುದು ತಪ್ಪು ಗ್ರಹಿಕೆ. ವಿದ್ಯಾಭ್ಯಾಸದ ಮೂಲ ಉದ್ದೇಶ ಮಾನವನ ಮಾನಸಿಕ ವಿಕಾಸ. ಮಾನವನಿಗೆ ಸುಖ-ಸಂಪತ್ತುಗಳಿಗಿಂತ ಆತ್ಮಗೌರವ, ದೇಶಾಭಿಮಾನಗಳು ಹೆಚ್ಚಿನ ನೆಮ್ಮದಿಯನ್ನು ಕೊಡಬಲ್ಲವು. ಹಣ ಸಂಪಾದನೆಗಾಗಿ ಯಾಂತ್ರಿಕವಾಗಿ ಜೀವಿಸುವುದೆಂದರೆ ಆದರ್ಶಗಳಿಗೆ ತಿಲಾಂಜಲಿಯನ್ನು ಕೊಟ್ಟಂತೆ' ಎಂದು ನುಡಿದರು. ಅವರೇ ಡಾ॥ ಕೃಷ್ಣಾನಂದ ಲಕ್ಷ್ಮಣ ಕಾಮತ್. ಕಾಮತರು ಬಹುಮುಖ ಪ್ರತಿಭೆಯುಳ್ಳವರಾಗಿದ್ದರು. ಕನ್ನಡದಲ್ಲಿ ವಿಜ್ಞಾನ ವಿಷಯಗಳನ್ನು ಹೇಗೆ ಸರಳವಾಗಿ ಹೇಳಬಹುದು ಎನ್ನುವುದನ್ನು ತೋರಿಸಿಕೊಟ್ಟ ಆದ್ಯರು. ಛಾಯಾಗ್ರಹಣ, ರೇಖಾಚಿತ್ರಗಳು ಹಾಗೂ ಜಲವರ್ಣ ಚಿತ್ರಕಲೆಯಲ್ಲಿ ಅಪಾರ ಆಸಕ್ತಿ.

+ + +



ಕೃತಿಯ ಲೇಖಕಿ ಡಾ॥ ಗೀತಾ ಶೆಣೈ ತಮ್ಮ ಬರವಣಿಗೆಯಲ್ಲಿ ಸೌಂದರ್ಯ ಮತ್ತು ಲಾಲಿತ್ಯವನ್ನು ಕಾಪಿಟ್ಟುಕೊಂಡವರು. ಕನ್ನಡದಲ್ಲಿ ಎಂ.ಎ., ಪಿಎಚ್.ಡಿ. ಪದವೀಧರರು. ಸಂಶೋಧನೆ, ಭಾಷಾಂತರ ಬರೆಹಗಳಂತಹ ಸಾಹಿತ್ಯ ಚಟುವಟಿಕೆಗಳಲ್ಲಿ ಸದಾ ಉತ್ಸಾಹ. ಇವರು ಅನುವಾದಿಸಿದ ಧರ್ಮಾನಂದ ಕೊಸಾಂಬಿ, ಡಾ॥ ಜ್ಯೋತ್ಸ್ನಾ ಕಾಮತ್ ಮತ್ತು ಮೀನಾ ಕಾಕೊಡ್ಕರ ಮುಂತಾದವರ ಕೃತಿಗಳನ್ನಲ್ಲದೆ ಇವರೇ ರಚಿಸಿರುವ ಹಲವಾರು ಸ್ವತಂತ್ರ ಕೃತಿಗಳನ್ನು ನವಕರ್ನಾಟಕ ಪ್ರಕಟಿಸಿದೆ. ಕುವೆಂಪು ಭಾಷಾ ಭಾರತಿ ಪ್ರಾಧಿಕಾರದ ಅನುವಾದ ಪ್ರಶಸ್ತಿಯೂ ಇವರಿಗೆ ಲಭಿಸಿದೆ.




